# Chika-Devaraja Binnapam

**Being A Discourse On**

## THE ESSENCE OF VISISHTADVAITA

BY

MAHARAJA CHIKADEVARAJA WADAYAR.



[*In three Parts—Kannada original, free Tamil translation, and free English translation with notes.*]

WITH A FOREWORD BY

SRI G. R. JOSYER, M.A., F.R.E.S.

PUBLISHED BY

R. TIRUNARANA IYENGAR, B.A.,
*Rtd. Asst. Commissioner,*
*Vanivilas Mohalla, Mysore.*



MYSORE:
Printed at the Coronation Press.
1949

**Rs. 5-0-0.**

# FOREWORD.

Chikadevaraja Wodayar, Maharaja of Mysore, has left a name embalmed in peoples' memory, like that of Louis XIV of France, Queen Elizabeth of England, Augustus of Rome, Akbar of Delhi, and Krishnadevaraya of Vijayanagar.

He ascended the throne in 1673 and reigned for 31 years. He was a contemporary of Aurangzeb and Shivaji, and had to fight and repulse the armies of both.

He was a Ruler, gifted alike with military talents, administrative talents, and literary talents. His military achievements were equal to those of Maharaja Kantheerava Narasaraja Wodayar. He was the first Ruler to appoint a Council of Ministers to conduct the administration. He inaugurated the Postal system, established what are called "Regulated Markets," and provided facilities for industries and commerce by fixing weights and measures, and by other means. He imposed checks on the acquisition of unlimited wealth, and three centuries ago anticipated the modern socialist trend.

And like good king Bhoja he was a patron of poets, and a poet himself. Three of his Minis-

ters, Tirumalarya, Chikkupadhyaya and Shadakshariah were distinguished poets. Singararya, the dramatist of Kannada, Sanchia Honnamma, the moral poetess, and Lakshmeesa, the most beloved of Kannada poets, are of his time.

He himself was the author of two devotional works, "Chika-devaraja Binnapam," and "Geeta Gopalam," and of several songs in tripadi and shatpadi metres.

Having repulsed invaders, and curbed neighbours bent on aggression, he had ensured security to his peoples' life and property. Timely rains, by the grace of God, had given them peace and plenty in this world. He did not however rest content with that. He wanted to secure their welfare also in the other world, and therefore sought to place before them the truths of life and salvation, simply, succinctly, understandably.

"ಎಲ್ಲರುಮಱಿವಂತೆ ಕನ್ನಡವಾತಿನೊಳಂ ಮೆಲ್ಲುಡಿಗಳಿಂದೆ ಅಖಿಲತತ್ತ್ವಾರ್ಥಂಗಳಂ ಸಂಗತಿಗೊಳಿಸಿ, ತಾನ್ತನ್ನ ಕುಲದೇವತೆಯುಪ್ಪ ಯಾದವಗಿರಿ ನಾರಾಯಣನಡಿದಾವರೆಗಳ್ಗೆ ಬಿನ್ನಪಂಗೆಯ್ವ ನೆವದೊಳ್ ಮೂವತ್ತುಂ ಬಿನ್ನಪಂಗಳಂ ಪವಣ್ಗೆಯ್ವಂ," he says in the preamble to "Chikadevaraja Binnapam." The aim, the purpose, the execution, of the works, all deserve praise.

To have analysed the theories, doctrines, and inculcations of Sree-Vaishnavism into 30 groups, and expounded them in 30 one-page paragraphs of mellifluous prose, bespeaks a mental attainment which would be praise-worthy in a scholar, and is especially so in a king.

Chikadevaraja Wadiyar wrote the work for the benefit of his vernacular subjects. Three centuries after its birth, the work is now found to be trebly useful, because Tamil-knowing Sree-Vyshnavas and English-knowing Sree-Vyshnavas are as ignorant of their faith as the Kannada subjects of the Royal author.

Mr. R. Tirunarana Iyengar, who has brought out the Tamil and English translations of the work besides the original work itself, deserves the grateful thanks of all three classes of readers for his altruistic endeavours. Also, in the words of H. E. The Governor General, the "very interesting publication serves the double purpose of expressing his devotion to Sri Ramanuja and loyalty to the Mysore Royal Family."

What distinguishes man from animals is not his political organisation, or his social organisation, because the animals, and even insects, have

got them, such as the elephants, the bees, the ants; but his religious enlightenment. If he has not got that, he is an animal and not a man.

Maharaja Chikadevaraja Wadayar's effort to provide that illumination, and Mr. R. Tirunarana Iyengar's effort to spread that illumination to an ever-expanding circle, are well-nigh beyond praise. I trust that the book will find a place in every Sree-Vyshnava household.

MYSORE,
*7th April, 1949.*

**G. R. JOSYER,**
M.A., F.R.E.S.



## PUBLISHER'S SUBMISSION.

---

This work is one of the holy works (Divya-Prabandhas) of the royal author, Sri Chikadeva Maharaja, Ruler of Karnataka, whose capital was Srirangapattana and whose reign was from 1672 A.D. to 1704 A.D. The work should have been written during this period.

This work was first printed from Palm-leaf manuscripts more than fifty years ago in the journal "Aryamatha Sanjeevini," which was then being conducted by the late M. A. Ramanuja Iyengar. Some 3 or 4 years afterwards, the work appeared in the Kavya Kalanidhi Series, a journal which was being jointly edited by the late erudite scholars, S. G. Narasimhachariar and the said M. A. Ramanuja Aiyengar.

To this work attaches the unique distinction of collecting together and presenting in a concise and easily digestible form all the essential doctrines of the Visishtadvaita School of the Vedanta Philosophy. Such a work is hardly to be found in any other language. From a study

of the work it will be found that what the author says in his introduction about his own work is fully justified. The majority of the modern generation of the *Srivaishnavas*, though otherwise educated, I feel, are not adequately conversant with the basic principles of their own *Siddhanta*. This is just the work which will give them the necessary grounding. It justly deserves to be in the hands of every Vaishnava who calls himself a follower of Sri Ramanuja and an adherent of the Visishtadvaita Siddhanta. It is a work which has to be read, re-read and pondered over, and to which one should go again and again for light and guidance. Each study will throw fresh light on the truths of the *Siddhanta*. A clear knowledge of this work will enable the reader to understand better the significances conveyed in the *Prasthana-traya*—*i.e.*, the *Upanishads*, the *Vedanta Sutras* and the *Bhagavadgita* —the *Divya Prabandhas* of the Alwars and the lucid commentaries thereon, the *Rahasyas*, and other works of the Acharyas.

The present publication is divided into three parts. The First Part contains the Kannada original; the Second Part is a free Tamil translation with a few notes here and there, and the

Third Part is an English translation with some notes. This arrangement is adopted to suit the convenience of both the Karnataka and Tamil-Nad Vaishnavites. The significances and the religious devotional pleasure which dawn in the minds of the readers, by the Sanskrit-Kannada and Sanskrit-Tamil terms cannot be had by a mere study of the English translation.

I am grateful to my young cousin, Sri M. R. Sampatkumaran M.A., the learned scholar and son of the celebrated Professor M. Rangacharyar, who went through the manuscripts in English and Tamil, and made corrections and helpful suggestions. I am also indebted to Sri G. R. Josyer, M.A., the Editor of the *Rationalist*, a weekly journal of Mysore, for kind permission to put in book-form the English translation and notes which were first published in his journal in 1947 and 1948. I am thankful to the Coronation Press for getting printed the first and the third parts.

Arakere House,
Mysore.

R. TIRUNARAYANA AIYENGAR.

|| ಶ್ರೀಃ ||

# ಪ್ರಥಮ ಭಾಗ

## ಕರ್ಣಾಟಕಮಂಡಲಾಧೀಶ್ವರ
## ಶ್ರೀ ಚಿಕದೇವರಾಯವಿರಚಿತವಾದ

# "ಚಿಕದೇವರಾಯ ಬಿನ್ನಪಂ."

॥ ಶ್ರೀರಸ್ತು ॥

# ಚಿಕದೇವರಾಜ ಬಿನ್ನಪಂ



## ॥ ಪೀಠಿಕೆ ॥

ಶ್ರೀರಮಣನಖಿಲಸದ್ಗುಣ ।
ವಾರಿಧಿಯಾನಂದಮಯವಿಮಾನೋದರವಿ ॥
ಸ್ಫಾರಿತರೂಪಂ ಯದುಗಿರಿ ।
ನಾರಾಯಣನಾಳ್ದನಕ್ಕೆ ನರಪತಿಗನಿಶಂ ॥ ॥ ೧ ॥

ಆನಂದೈಕರಸಂ ಸಮಸ್ತಜಗದಾನಂದಂಗೆ ಚಕ್ರಾಯುಧಂ ।
ಸೇನಾಚಕ್ರವಿಮರ್ದಿತಾಹಿತಮಹೀಚಕ್ರಂಗೆ ವೈಕುಂಠ ನ ॥
ನ್ಯೂನೋಪಾಯವಿಕುಂಠಿತಾರಿಧರಣೀಭೃದ್ದುರ್ಗವರ್ಗಂಗೆ ಲ ।
ಕ್ಷ್ಮೀನಾರಾಯಣನೀವನಕ್ಕೆ ಚಿಕದೇವೇಂದ್ರಂಗೆ ಸಾಮ್ರಾಜ್ಯಮಂ ॥ ೨ ॥

ಶ್ರೀಮದ್ಯಾದವಶೈಲವಲ್ಲಭಪದಾಂಭೋಜಾತಭೃಂಗಂ ಗುಣಾ ।
ರಾಮಂ ಪಶ್ಚಿಮರಂಗಧಾಮನಗರೀಸಿಂಹಾಸನಾಧೀಶನು ॥
ದ್ದಾಮಶ್ರೀಯದುವಂಶಕಲ್ಪಕತರುಪ್ರೌಢಪ್ರವಾಳಂ ಜಗ ।
ತ್ರೀಮಂಬೆತ್ತು ನೆಗಳ್ಗೆ ಬಾಳ್ಗೆ ಚಿಕದೇವೇಂದ್ರಂ ಮಹೀಚಂದ್ರಮಂ ॥

ಮಯನೋ ಶಂಬರನೋ ದಶಾಸ್ಯಸುತನೋ ಮಾರೀಚನೋ ಎಂಬಿನಂ ।
ಭಯದಿಂದಾಗರೆ ಢಿಳ್ಳಿ ಭಾಗನಗರ ಪ್ರಾಂತಂಗಳೊಳ್ ನಾಡುಗರ್ ॥
ಜಯಜೀಯೆಂದಿದಿರಿಟ್ಟು ಕಪ್ಪದೊದವಿಂ ಪೆಂಪೇಱು ಬಂದಾಶಿವಾ ।
ಜಿಯ ಸೊರ್ಕಂ ಮುರಿದಿಕ್ಕಿಯಪ್ರತಿಮವೀರಾಭಿಖ್ಯೆಯಂ ತಾಳ್ದಿದಂ ॥ ೪ ॥

ಢಿಳ್ಳಿಯ ಬಾಗಿಲೊಳ್ ಪರಿದು ಕೊಳ್ಳಿಯ ಕೊಂಡುಬಿಸಿ ಗೋಲಕೊಂಡೆಯಂ
ಜಳ್ಳಿಸಿಯೊಕ್ಕಲಿಕ್ಕಿ ವಿಜಯಾಪುರಮಂ ಬಱಗೆಯ್ದು ಸೊರ್ಕಿನಿಂ ॥
ದಳ್ಳಿಱಿವಾಶಿವಾಜಿಸುತಶಂಭುಜಿಯೇಱಿಗೆಯನುರ್ಬು ಕೊರ್ಬುವಮಂ ।
ತೆಳ್ಳನೆಗೆಯ್ದನದ್ಭುತಪರಾಕ್ರಮದಿಂ ಚಿಕದೇವಭೂವರಂ ॥ ೫ ॥

ಮೂಗಂ ಕೊಯ್ದು ಸವಂತರಾವುವನವಂಗಿತ್ತತ್ರಸನ್ಯಾಸಮಂ ।
ಲೋಗರ್ ಭಾಪೆನೆ ಪೊಯ್ದು ಚಿತ್ರವಧೆಗೆಯ್ದಾ ಜೈತಜೀಘಾಟಿಯಂ ॥
ಬೇಗಂ ದಾದಜಿಕಾಕಡಾಂಕನಣಲಂ ಕೊಯ್ದೆಲ್ಲ ದೇಶಕ್ಕವಂ ।
ದ್ವೇಗಂ ಪ್ರೋಕ್ಷಿಸಿನವಾಳ್ದನಪ್ರತಿಮವೀರಂ ಮೇದಿನೀಚಕ್ರಮಂ ॥ ೬ ॥

ನೆರೆವ ಸುರಾಸುರರ್ ಶರಧಿಯಂ ಕಡೆಯುತ್ತಿರೆಯೆಂಟುದಿಕ್ಕಿನೊಳ್ ।
ತೆರೆ ಕವಿವೆಯ್ದೆ ನುರ್ಗುನುಸಿಗೆಯ್ದು ಪಳಂಚುವ ಮಂದರಾದ್ರಿವೋಲ್ ॥
ಪಿರಿಕಿಱಿವೆನ್ನಪೆಣ್ದೆಸೆಯ ಮನ್ನೆಯರೊಟ್ಟನೊಳೊನ್ದು ವೇಳೆಯೊಳ್ ।
ಪರಿತರೆ ಪೊಯ್ದುಪೊಯ್ದು ಭರದಿಂ ಬಱಗೆಯ್ದನಭೇದ್ಯವಿಕ್ರಮಂ ॥ ೭ ॥

ಬಳಸಿಯುಮೊನ್ದುಗೂಡಿ ಪರಿತಂದ ರಿಪುಕ್ಷಿತಿಪಾಲವರ್ಗಮಂ ।
ಘಳಿಲನೆ ಪೊಯ್ದನೆಂದೊಡದು ಪೆರ್ಮೆಯೆ ಯುಪ್ರತಿಮಂಗಿದಿರ್ಚಿದಾ ॥
ಬಳಯುತರಪ್ಪ ಬಲ್ಲುಕುಪಶಾಹನನೇದುಲಶಾಪನಂ ಕರಂ ।
ಮುಱಿಗಿಸಿ ವೈಮೆವೆತ್ತನೆನಲೊಪ್ಪುಗುಮೀ ಚಿಕದೇವಭೂವರಂ ॥ ೮ ॥

ತಳ್ವದೆ ಢಿಳ್ಳಿಯಾಳ್ವ ದೊರೆಯಂ ಕರೆತಂದವನತ್ತಣಿಂದಮೇ ।
ತೋಳ್ವಳಿವೆತ್ತ ಭಾಗನಗರಾಧಿಪನಂ ವಿಜಯಾಪುರೇಶನಂ ॥
ಬಾಳ್ವಿಣನೆಂಬಿನಂ ಪಿಡಿಪು ಕೈಸೆಱಿಗೊಂಡುಱಿ ಪಾಡುಪಂತದಿಂ ।
ಬಾಳ್ವನಭೇದ್ಯವಿಕ್ರಮನೆನಲ್ ಚಿಕದೇವನರೇಂದ್ರಚಂದ್ರಮಂ ॥ ೯ ॥

॥ ಲಯಗ್ರಾಹಿವೃತ್ತ ॥

ಅಂದಿವನಿನಳ್ಕಿ ಭಯದಿಂದೆ ಮಣಿವಿರ್ದ ನೃಪ
ಬೃಂದಮನಿತುಂ ಭರಮೊಳೊಂದುವರೆದೊಳ್ಪಿಂ ।
ಸಂದಿಸಿ ಶಿವಾಜಿಗನುವಿಂದೊರೆಯೆ ಮರ್ಮಮನ
ಮಂದಿರೊಡಗೂಡಿಯುವನಂದು ಕವಡಿಂದಂ ॥

ಸಂದಣೆಯು ಕಾಳೆಗದೊಳೊಂದಿನಿಸು ಮುಂಬರಿಯೆ
ಬಂದೆಱಗಿ ಪಾವುಗಳ ಗೊಂದಣದೆ ವಿಷ್ಣು ।
ಸ್ಯಂಧನದ ಮಾಱ್ಕೆಯೊಳೆ ಕೊಂದು ಕೊಲೆಯಾಡಿದಳ
ವಿಂದೆ ಚಿಕದೇವನೃಪನಿಂದು ಸೊಗವಾಱ್ಗಂ ॥ ॥ ೧೦ ॥

ಒಂದು ದೆಸೆಯೊಳ್ ತರುಕರೊನ್ದುಕಡೆಯೋೞ್ ಮೊಱಸ
ರೊಂದೆಸೆಯೊಳಾರೆಯರ ಬಿಂದಮುಳವಿಂ ಬೇ ।
ರೊಂದು ಬಱಿಯೊಳ್ ತಿಗುಳರೊಂದಿರವಿನೊಳ್ ಕೊಡಗ
ರೊಂದು ಕೆಲದೊಳ್ ಮಲೆವರೊಂದುವೆರೆದೆಲ್ಲರ್ ॥
ಸಂದಣಿಸಿ ಕಾಳೆಗಕೆ ಮುಂದುವರಿವನ್ನವುದ
ಟೆಂದವರ ತಟ್ಟುಗಳ ಪಂದಲೆಗಳಂ ದಿ ।
ಗ್ಬೃಂದಬಲಿಯಿತ್ತು ನಲವಿನ್ದ ಚಿಕದೇವನೃಪ
ನಂದಮಿಗೆ ಪೆರ್ಜಸಮನೊಂದಿ ಸೊಗವಾಱ್ಗಂ ॥ ॥ ೧೧ ॥

ಶ್ರೀಪತಿಯು ಸೇವೆಯೆಂದೇ ।
ಈಪರಿಯೊಳ್ ಕ್ಷಾತ್ರಧರ್ಮಮೆಸಗುತೆ ಶಾಸ್ತ್ರಾ ॥
ಲಾಪಂಗಳ ತತ್ತ್ವಾರ್ಥನಿ ।
ರೂಪಣದಿಂ ಪೊಱ್ತುಗಳೆವನಪ್ರತಿಮಾಂಕಂ ॥ ॥ ೧೨ ॥

ಓದಿ ತಿಳಿದೊಳ್ಪಿನಿಂದಂ ।
ವೇದಾಂತದ ತತ್ತ್ವಗತಿಯನೆಲ್ಲರುಮಱಿವಂ ॥
ತಾದರದಿಂದಪ್ರತಿಮಂ ।
ಯಾದವಗಿರಿಯೊಡೆಯನಡಿಗೆ ಬಿನ್ನತಿಗೆಯ್ದಂ ॥ ॥ ೧೩ ॥

ಮೂವತ್ತುಂ ಬಿನ್ನಪದಿಂ ।
ದಾವೇದಾನ್ತಾರ್ಥ ತತ್ತ್ವಮನಿತುಂ ಸೊಗದೊಳ್ ॥
ಭಾವನೆಗೆ ಬರ್ಪಿನಂ ಚಿಕ ।
ದೇವಂ ಯದುಶೈಲನಾಥನಡಿಗುಸಿರ್ದನಿದಂ ॥ ॥ ೧೪ ॥

ಕ್ಷಿಪ್ರದೊಳೆಲ್ಲರುಮುಱಾವಂ ।
ತಪ್ರತಿಮತ್ವಾದಿ ದೋಷಮಮಂ ಕಳೆದೊಪ್ಪಿಂ ॥
ದಪ್ರತಿಮವೀರನರಪತಿ ।
ಯುಪ್ರಾಕೃತನಡಿಗೆ ಮಣಿದು ಬಿನ್ನತಿಗೆಯ್ದಂ ॥ ॥ ೧೫ ॥

**ಅದೆಂತೆನೆ :—**

ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜಂ ರಾಜಪರಮೇಶ್ವರಂ ಪ್ರೌಢಪ್ರತಾಪಸಪ್ರತಿಮವೀರನರಪತಿ ಶ್ರೀ ಚಿಕದೇವಮಹಾರಾಯಂ ಶ್ರೀರಂಗಪಟ್ಟಣದೊಳ್ ಸಿಂಹಾಸನಾರೂಢನಾಗಿ ಸಾಮ್ರಾಜ್ಯದೀಕ್ಷೆಯಂ ತಳೆದು ದೇವಬ್ರಾಹ್ಮಣಪರಿಪಾಲನಮಂ ಪ್ರಧಾನಂಗೆಯ್ದು ಸಕಲ ಪ್ರಜೆಗಳಂ ಪಾಲಿಸುತ್ತಿರ್ಪನಂ ; ಉತ್ತರದೇಶದೊಳುದ್ವೃತ್ತಚರಿತ್ರನೆನಿಸಿ ಅಱುವತ್ತುಂಸಾಸಿರಂ ವಾರುವಂಗಳುಂ ಲಕ್ಕದೆಣಿಕೆಯುಕಾಲ್ಗಳುಂ ಬೆರಸು ನಡೆವ ಢಿಳ್ಳಿಯ ನಾಡನನಿತುಮಂ ಕೊಳ್ಳೆಯೊಳಂ ಕಳ್ಳಗಾಳೆಗದೊಳಂ ಜಳ್ಳುಗೆಯ್ದು, ವಿಜಯಾಪುರದರಸಂ ಜಯಿಸಿ, ಅವರ ನಾಡುಬೀಡುಗಳಂ ಕೊಂಡು, ಗೋಲಕೊಂಡೆಯನವನಂ ಬಂಡುಗೆಯ್ದು ಅವನಿತ್ತ ಕಪ್ಪಮನೊಪ್ಪುಗೊಂಡು, ಆ ಸೊರ್ಕಿನಿಂ ಗಳ್ಕನೆ ಕನ್ನಡನಾಡಂ ಪೊಕ್ಕ ಶಿವಾಜಿಯುಂ ಅಜಿರಂಗದೊಳೋಜೆಗೆಡಿಸಿ, ಅವನ ಸೇನಾನಿಗಳೊಳ್ ಜೈತಜಿಕಾಟಿಕರನಂ ಘೋಟಕಖುರಪುಟಂಗಳಿಂ ತೊತ್ತುಳಿದುಬಾಸಿ, ಮೂಗುಕಿವಿಕೊರಲ್ಕೆಯ್ಕಾಲ್ಗಳಂ ಖಂಡಿಸಿ, ಆತುಂಡುಗಳಿಂ ಪ್ರೇತಪಿಂಡುಗಳಂ ತಣಿಯಿಸಿ, ಮತ್ತಮಾದಾದಜಿಕಾಕಡೆಯೆನಿಪನ ಅಣಲಂ ಕೊಯ್ದು, ಆಪನ್ನಲಿಯುಂ ಮುನ್ನಿಯೊಳ್ ಮೆಱೆಯಿಸಿ, ಆ ರಭಸದಿಂ ಶಂಭೋಜಿಯುಂ ಭಯಾರ್ಣವದೊಳ್ ಮುಳುಂಗಿಸಿ, ಆವಂಗೆ ನೆರವಾಗಿ ಬಂದ ಎಕ್ಕೋಜಿಯ ಜನ್ಮವಂ ಸಾಕುಮಾಡಿ, ಅವನ ಮಹಾಪ್ರಧಾನನೆನಿಸುವ ಎಸವಂತರಾವುವ ನಾಸಾಚ್ಛೇದನಂಗೆಯ್ದು, ಮತ್ತಮಾ ಶಂಭೋಜಿಗೆ ಕಪ್ಪವಿತ್ತುಂ ಕೂಟಮಂ ಕಳಿಪಿ ಪೆಂಪುಗೆಯ್ದ ಗೋಲಕೊಂಡೆ ವಿಜಯಾಪುರದವರಂ ಕೇಣಂಗೊಂಡು, ಅವರನಂಡಲೆವುದರ್ಕೆ ಢಿಳ್ಳಿಯಾಳ್ವ ಮಹಾಪಾದುಶಾಹನೆನಿಸುವ ಅವರಂಗಶಾಹನಂ ಬರಿಸಿ, ಅವನಿಂದವರಿರ್ವರ ದೇಶಕೋಶಂಗಳಂ

ಕವರ್ದು ಕೈಸೆಜಿಗೊಂಡು, ಮತ್ತಮಾವುರಾಟರಾಟೋಪಮುಂ ನಂಬಿ ಮುುಂಬರಿದು ಎಡಬಲದೊಳನಿಸಿನಿಸುಂ ಪೊಣರ್ದ ಮೊಬಿಸತಿಗುಳಕೊಡಗ ಮಳೆಯಾಳನಾಡ ಮನ್ನೆಯರಂ ಬನ್ನಂಬಡಿಸಿ, ಈ ತೆಜದೊಳೆಣ್ದೆಸೆಯಂ ಗೆಲ್ದು, ಸುಖಸಂಕಥಾವಿನೋದದಿಂದಿರುತ್ತಿ; ಚಿತ್ತದೊಳ್ ದಯಾರಸ ಮುಣ್ಮೆಯಾಳೋಚಿಸಿದಂ :—

ಎಣ್ದೆಸೆಯ ಪಗೆಗಳಡಂಗಿದುದಱಿಂ ಪ್ರಜೆಗಳ್ಗೆ ರಾಜಿಕಭಯ ಮಿಲ್ಲದೆಯುಂ, ದೇವತಾಪ್ರಸಾದದಿಂ ಮೞೆಬೆಳೆಗಳುಂಟಾದುದಱಿಂ ದೈವಿಕಭಯಮಿಲ್ಲದೆಯುಮಿರ್ಪುದಱಿಂ, ಪ್ರಜೆಗಳನಿಬರುಂ ಇಹದೊಳ್ ಸೊಗವಾಳ್ದಪರ್. ಇವರ್ಗೆ ಪರಗತಿಯುಮಂ ಸಂಪಾದಿಸವೇಳ್ಪುದೆನ್ದಾ ರಯ್ದು,

ಶ್ಲೋ॥ “ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ।  
ಯೇಽಪಿ ಸ್ಯುಃ ಪಾಪಯೋನಯಃ ॥  
ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾ ।  
ಸ್ತೇಽಪಿ ಯಾನ್ತಿ ಪರಾಂ ಗತಿಮ್ ॥”

ಎಂದು ಗೀತೆಯೊಳ್ ಶ್ರೀಕೃಷ್ಣಂ ತಾನೇ ನಿರೂಪಿಸಿದ ತೆಱ ದೊಳ್ ಪಿಂತಣ್ಗೆನಿತಾನುಂ ಪಾಪಿಗಳಾದೊಡಂ ಆವ ಜಾತಿಯೊಳ್ ಪುಟ್ಟಿ ದೊಡಮಾಗಳುಂ ತತ್ವಜ್ಞಾನದಿಂ ತನ್ನೊಳ್ಭಕ್ತಿಗೆಯ್ದು ನಂಬಿದವರ್ಗೆ ಮುಕ್ತಿ ತಪ್ಪದೆನ್ದೆಣಿಸಿ, ಅಕ್ಕರಮನಱಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ವಜ್ಞಾನಮುಪ್ಪದರಿದು, ಎಂದು—ಎಲ್ಲರುಮಱಿವಂತೆ ಕನ್ನ ಡವಾತಿನೊಳಂ ಮೆಲ್ನುಡಿಗಳಿಂದೆ ಅಖಿಲತತ್ವಾರ್ಥಂಗಳಂ ಸಂಗತಿಗೊಳಿಸಿ, ತಾನ್ತನ್ನ ಕುಲದೇವತೆಯುಪ್ಪ ಯಾದವಗಿರಿ ನಾರಾಯಣನಡಿದಾವರೆಗಳ್ಗೆ ಬಿನ್ನಪಂಗೆಯ್ವ ನೆವದೊಳ್ ಮೂವತ್ತುಂ ಬಿನ್ನಪಂಗಳಂ ಪವಣ್ಗೆಯ್ದಂ. ಅವಱಲ್ಲಿ :—

ಒಂದನೆಯ ಬಿನ್ನಪದೊಳ್ ಅವಾಪ್ತಸಮಸ್ತಕಾಮನಾದ ಶ್ರೀ ಮನ್ನಾರಾಯಣಂ ಪರವ್ಯೂಹವಿಭವಾನ್ತರ್ಯಾಮ್ಯರ್ಚಾವತಾರಂಗಳನಂಗೀ

ಕರಿಸಿರ್ಪುದು ಭಕ್ತಾನುಗ್ರಹಾರ್ಥವೆಂದವನ ದಯಾತಿಶಯಮಂ ಪ್ರಕಟಿಸಿದಂ.

ಎರಡನೆಯ ಬಿನ್ನಪದೊಳ್ ಶ್ರೀಮನ್ನಾರಾಯಣನೇ ಜಗತ್ಕಾರಣನೆಂದು ನಿರೂಪಿಸಿದಂ.

ಮೂಱನೆಯ ಬಿನ್ನಪದೊಳ್ ಆ ಜಗತ್ಕಾರಣವಸ್ತುವಂ ತಿಳಿಯಕೂಡದೆಂಬಾಕ್ಷೇಪಮಂ ಪರಿಹರಿಸಿದಂ.

ನಾಲ್ಕನೆಯ ಬಿನ್ನಪದೊಳ್ ಆ ಜಗತ್ಕಾರಣವಸ್ತುವಂ ತಿಳಿವುದುಂ ವೇದಶಾಸ್ತ್ರಂಗಳಿಂದಮೇ ಎಂದು ಬಣ್ಣಿಸಿದಂ.

ಐದನೆಯ ಬಿನ್ನಪದೊಳ್ ಆ ವೇದಶಾಸ್ತ್ರಂಗಳನಿತುಂ ಶ್ರೀಮನ್ನಾರಾಯಣನನೆ ಪ್ರತಿಪಾದಿಸುವ ತೆಱನಂ ತಿಳುಪಿದಂ.

ಆಱನೆಯ ಬಿನ್ನಪದೊಳ್ ಆ ವೇದಶಾಸ್ತ್ರಂಗಳೊಳ್ ತೋಱುವ ವಿರೋಧಂಗಳಂ ಮಾಣಿಸಿದಂ.

ಏೞನೆಯ ಬಿನ್ನಪದೊಳ್ ಆ ವೇದಶಾಸ್ತ್ರಸಿದ್ಧಮಾಗಿ ನಾರಾಯಣಂಗೆ ಶರೀರಮಾದ ಜಗತ್ತು ಮಿಥ್ಯೆಯಲ್ತು, ಸತ್ಯಮಾಗಿರ್ಪುದೆಂಬುದುಂ ಪ್ರತಿಪಾದಿಸಿದಂ.

ಎಂಟನೆಯ ಬಿನ್ನಪದೊಳ್ ಸ್ವಾಪ್ನದೃಷ್ಟಾಂತದಿಂ ಪ್ರಪಂಚಂ ಮಿಥ್ಯೆಯೆಂದು ಭ್ರಮಿಸದಂತೆ ಕನಸಿನೊಳ್ ಕಾಣ್ಬ ವಸ್ತುಗಳಂ ತತ್ಕಾಲದೊಳ್ ಜಗದೀಶ್ವರನುಂಟುಮಾಳ್ಪುದಱಿಂ ಸತ್ಯಮೆಂದುಪಪಾದಿಸಿದಂ.

ಒಂಬತ್ತನೆಯ ಬಿನ್ನಪದೊಳ್ ಜಗಮಂ ವಿಷಮಮಾಗಿ ಸೃಜಿಸುವುದಱಿಂ, ಜಗದೀಶ್ವರಂ ವಿಷಮನುಂ ನಿರ್ದಯನುಮಕ್ಕು ಮೆಂಬಾಕ್ಷೇಪಮಂ ತೀರ್ಚಿದಂ.

ಪತ್ತನೆಯ ಬಿನ್ನಪದೊಳ್ ಘಟಪಟಾದಿದೃಷ್ಟಾಂತದಿಂ ಜಗಕ್ಕೆ ಮೂಱುಂತೆಱದ ಕಾರಣಂಗಳ್ ಬೇಱೆಬೇಱಕ್ಕೊಳವೆಂಬಾಕ್ಷೇಪಮಂ ಚಿದಚಿದ್ವಸ್ತು ಶರೀರಕನಾದ ಜಗದೀಶ್ವರನೊರ್ವನೇ ಮೂಱುಂತೆಱದ ಕಾರಣಮಾಗಿರ್ಕುಮೆಂದು ಸಮಾಧಾನಂಗೆಯ್ದಂ.

ಇಂತು ಪತ್ತುಂ ಬಿನ್ನಪಂಗಳೊಳ್ ಶ್ರೀಮನ್ನಾರಾಯಣನೇ ಪರಮದಯಾಳುವುಂ, ಜಗತ್ಕಾರಣನುಂ, ಅಪರಿಚ್ಛೇದ್ಯಮಹಿಮನುಂ, ಸಕಲವೇದವೇದ್ಯನುಂ, ಆಶ್ಚರ್ಯಚರಿತ್ರನುಂ, ಚೇತನಾಚೇತನಶರೀರಕನುಂ, ಅಘಟಿತಾರ್ಥ ಘಟಕನುಂ, ಸರ್ವಸಮನುಂ ತ್ರಿವಿಧಕಾರಣನುಮೆಂದು ತಿಳಿಪಿದುದಱಿಂದೀಶ್ವರತತ್ವನಿರೂಪಣಂಗೆಯ್ದಂ.

ಪನ್ನೊಂದನೆಯ ಬಿನ್ನಪದೊಳ್ ಜೀವತತ್ವಸ್ವರೂಪವುಂ ವಿವರಿಸಿದಂ

ಪನ್ನೆರಡನೆಯ ಬಿನ್ನಪದೊಳ್ ತತ್ವಸೃಷ್ಟಿಕ್ರಮುಮಂ ತೋಱಿಸಿದಂ.

ಪದಿಮೂಱನೆಯ ಬಿನ್ನಪದೊಳ್, ಬ್ರಹ್ಮಾಂಡಸೃಷ್ಟಿಪ್ರಕಾರಮಂ ಬಗೆಗೊಳಿಸಿದಂ.

ಪದಿನಾಲ್ಕನೆಯ ಬಿನ್ನಪದೊಳ್ ಆ ಬ್ರಹ್ಮಾಂಡದೊಳಿರ್ಪ ಪದಿನಾಲ್ಕುಂ ಲೋಕಂಗಳ ನೆಲೆಯುಂ ನಿರ್ಣಯಿಸಿದಂ.

ಪದಿನೈದನೆಯ ಬಿನ್ನಪದೊಳ್ ಭೂಮಣ್ಡಲಪರಿಮಾಣಮಂ ಗಣನೆಗೆಯ್ದಂ.

ಪದಿನಾಱನೆಯ ಬಿನ್ನಪದೊಳ್ ಸುಖಾನುಭವಸ್ಥಾನಮಾದ ಭೂಸ್ವರ್ಗಂಗಳ ತೆಱನನಱಿವುಗೊಳಿಸಿದಂ.

ಪದಿನೇೞನೆಯ ಬಿನ್ನಪದೊಳ್ ದುಃಖಾನುಭವಸ್ಥಾನಂಗಳಾದ ನರಕಂಗಳ ಸ್ಥಿತಿಯುಂ ಬಿತ್ತರಿಸಿದಂ.

ಪದಿನೆಂಟನೆಯ ಬಿನ್ನಪದೊಳ್ ಪಾಪಫಲಂಗಳ್ ಕ್ರೂರಮಾಗಿರ್ಪುವೆಂದು ತೋಱಿ ಆ ಪಾಪಂಗಳನಿತುಂ ಶ್ರೀಮನ್ನಾರಾಯಣನ ಚರಣಾರವಿಂದ ಭಕ್ತಿಯೊಳೇ ಪರಿಹರಿಪುದೆಂಬುದನೆರ್ದೆಗೊಳಿಸಿದಂ.

ಇಂತು ಪರತತ್ವಸ್ವರೂಪಮೆಂಬುದಾದಿಯಾಗಿ ಈವರೆಗಮೇೞಿಂ ಬಿನ್ನಪದೊಳ್ ಪ್ರಾಕೃತ ಸೃಷ್ಟಿಕ್ರಮುಮಂ ಆ ತತ್ವಂಗಳಿಂ ಪುಟ್ಟಿದ ಬ್ರಹ್ಮಾಣ್ಡವಿಸ್ತಾರಮುಂ ಆ ಬ್ರಹ್ಮಾಣ್ಡದೊಳಿರ್ಪ ಪದಿನಾಲ್ಕುಂ ಲೋಕಂಗಳ

ನೆಲೆಯಂ ಅವಱೊಳ್ ಭೂಮಣ್ಡಲದ ಪರಿಮಾಣಮಂ ಭೂಸ್ವರ್ಗಗಳಂ ನರಕಯಾತನೆಗಳಂ ಆಯಾತನಾಪರಿಹಾರೋಪಾಯಮಂ ಪೇಳ್ದುದಱಿಂದೆ ಅಚಿತ್ತತ್ವಸ್ವರೂಪನಿರೂಪಣಂಗೆಯ್ದಂ.

ಇಂತು ಪದಿನೆಂಟುಂ ಬಿನ್ನಪಂಗಳಿಂ ಈಶ್ವರಚೇತನಾಚೇತನಂಗಳೆಂಬ ತತ್ವತ್ರಯಮಂ ನಿರೂಪಿಸಿದಂ. ಈ ಮೂಱುಂ ತತ್ವಂಗಳ ನೆಲೆಯಂ ವಿಚಾರಿಸೆ, ಚಿದಚಿತ್ತತ್ವಂಗಳೆರಡುಂ ಅಲ್ಪಸುಖಂಗಳುಂ ಅನಿತ್ಯಮುಮೆಂದು ಅವಱೊಳ್ ವೈರಾಗ್ಯಮುಂ ಈಶ್ವರತತ್ವಮೊಂದೇ ನಿರದಧಿಕಾನಂದಮೆಂದು ಅದಱೊಳನುರಕ್ತಿಯುಂ ಪುಟ್ಟುಗುಂ. ಇಂತು ವಿಷಯವಿರಕ್ತಿಯುಂ ಪರಮಾತ್ಮಭಕ್ತಿಯುಂ ಪುಟ್ಟಿದವರ್ಗೆ ಮೋಕ್ಷೋಪಾಯಮಪೇಕ್ಷಿತಮೆಂದು ಇನ್ನೀರಾಱುಂ ಬಿನ್ನಪಂಗಳಿಂದಂಬಿತ್ತರಿಸಿದಪಂ.

ಅದೆಂತೆನೆ:—

ಪತ್ತೊಂಬತ್ತನೆಯ ಬಿನ್ನಪದೊಳ್ ನಾಲ್ಕುಂ ಪುರುಷಾರ್ಥಂಗಳೊಳ್ ಮೋಕ್ಷಮೇ ಪಿರಿದೆಂದು ಪಡಿಗಟ್ಟಿದಂ.

ಇರ್ಪತ್ತನೆಯ ಬಿನ್ನಪದೊಳ್ ಸಾತ್ವಿಕಶಾಸ್ತ್ರಂಗಳಿಂದಮೇ ಮೋಕ್ಷೋಪಾಯಮಂ ತಿಳಿಯವೇಳ್ಪುದೆಂದೊರೆದಂ.

ಇರ್ಪತ್ತೊಂದನೆಯ ಬಿನ್ನಪದೊಳೆಲ್ಲಾ ತಂತ್ರಂಗಳೊಳಂ ಶ್ರೀಪಾಂಚರಾತ್ರಮೇ ಪ್ರಬಲಪ್ರಮಾಣಮೆಂಬುದಂ ನಿಱಂಗೆಗೊಳಿಸಿದಂ.

ಇರ್ಪತ್ತೆರಡನೆಯ ಬಿನ್ನಪದೊಳ್ ಮೋಕ್ಷೋಪಯೋಗಿಯಾದ ವಿಷಯವೈರಾಗ್ಯಂ ದುರ್ಘಟಮೆಂಬಾಕ್ಷೇಪಮಂ ನಿವಾರಿಸಿದಂ.

ಇರ್ಪತ್ತಮೂಱನೆಯ ಬಿನ್ನಪದೊಳ್ ಕೇವಲಕರ್ಮದಿಂ ಮುಕ್ತಿಯಿಲ್ಲೆಂಬುದಂ ದೃಢೀಕರಿಸಿದಂ.

ಇರ್ಪತ್ತನಾಲ್ಕನೆಯ ಬಿನ್ನಪದೊಳ್ ಬಯಸಿದನಿತುಮನೀವ ಸರ್ವೇಶ್ವರಂ ಮಿಕ್ಕ ಪುರುಷಾರ್ಥಮಂ ಬಯಸಿದವರ್ಗೆ ಅವರ್ ಬಯಸುವ ನಿರ್ಬಂಧದಿಂ ಆಯಾಪುರುಷಾರ್ಥಮನೀವಂ, ಮೋಕ್ಷಮಂ ಬಯಸುವರ್ಗೆ ಮನಮೊಲ್ದು ಮೋಕ್ಷಮನೇ ಸಂತೋಷದಿಂದೀವನೆಂಬುದಂ ಕಾಣಿಸಿದಂ.

ಇರ್ಪತ್ತೈದನೆಯ ಬಿನ್ನಪದೊಳ್ ಕಾಲಕರ್ಮಸ್ವಭಾವಾದಿಗಳಿಂದಮೇ ಅಪೇಕ್ಷಿತಫಲಮಕ್ಕುಮೆಂಬ ಭ್ರಮೆಯಂ ತೊಲಗಿಸಿದಂ.

ಇರ್ಪತ್ತಾಱನೆಯ ಬಿನ್ನಪದೊಳ್ ಶ್ರೀಮನ್ನಾರಾಯಣಂಗಲ್ಲದೆ ಮಿಕ್ಕಿನವರ್ಗೆ ರಕ್ಷಣಸಾಮರ್ಥ್ಯಮಿಲ್ಲೆಂಬುದಂ ಸೊಲ್ಲಿಸಿದಂ.

ಇರ್ಪತ್ತೇೞನೆಯ ಬಿನ್ನಪದೊಳ್ ಮೋಕ್ಷಮಂ ಬಯಸುವಂ ತನ್ನ ದೋಷಂಗಳನೆಣಿಸಿ ಅೞ್ಕವೇಡ ಭಗವದ್ಗುಣಂಗಳನೇ ಎಣಿಸಿ ಧೈರ್ಯಮಾಗಿರ್ಪುದೆಂದು ಪಸರಿಸಿದಂ.

ಇರ್ಪತ್ತೆಂಟನೆಯ ಬಿನ್ನಪದೊಳ್ ಸಂಸಾರದ ಬೇರೆನಿಸಿದ ಅವಿದ್ಯಾಕರ್ಮವಾಸನಾರುಚಿಪ್ರಕೃತಿಸಂಬಂಧಂಗಳಂ ಜಗದೀಶ್ವರಂ ತಾನೇ ಬಿಡಿಸುವನೆಂಬುದಂ ಪ್ರಕಾಶಂಗೆಯ್ದಂ.

ಇರ್ಪತ್ತೊಂಬತ್ತನೆಯ ಬಿನ್ನಪದೊಳ್ ಶ್ರೀಮನ್ನಾರಾಯಣನ ದಿವ್ಯರೂಪಂ ಅಪ್ರಾಕೃತಮಾಗಿ, ಮುಕ್ತಭೋಗ್ಯಮಾಗಿರ್ಪುದೆಂಬುದಂ ಅನುವದಿಸಿದಂ.

ಮೂವತ್ತನೆಯ ಬಿನ್ನಪದೊಳ್ ಪರವಾಸುದೇವನರೂಪಂ ಮುಕ್ತರ್ಗೆ ಪರಮಭೋಗ್ಯಮಾಗಿರ್ಪುದೆಂಬುದಂ ಪೇೞ್ದು ಕೃತಿಯಂ ನಿವೇದಿಸಿದಂ.



ಅವೆನ್ತೆನೆ:—

## ॥ ಒಂದನೆಯ ಬಿನ್ನಪಂ. ॥

ಪರವಾಸುದೇವ ಭಕ್ತರ ।
ಪೊರೆಯಲ್ ವ್ಯೂಹಾದಿಭಾವಮುಂ ತಳೆದೈಯೆಂ ॥
ದೊರೆದು ಯದುಶ್ಶೈಲನಾಥನ ।
ಚರಣಾಬ್ಜಕೆ ಬಿನ್ನವಿಸಿದನಪ್ರತಿಮಾಂಕಂ ॥ ॥ ೧೬ ॥

ಶ್ರೀಮನ್ನಾರಾಯಣಾ! ನೀಂ ಶ್ರಿಯಃಪತಿಯುಂ ಅಖಿಲದೋಷಪ್ರತ್ಯನೀಕನುಂ ಸಕಲ ಕಲ್ಯಾಣಗುಣಾಕರನುಂ ಅವಾಪ್ತಸಮಸ್ತಕಾಮನುಮೆನಿಸಿ ವೈಕುಂಠದೊಳ್ ದಿವ್ಯಮಹಿಷೀವರ್ಗಸಮೇತನಾಗಿ ಅನಂತಗರುಡವಿಷ್ವಕ್ಸೇನಾದಿ ನಿತ್ಯವರ್ಗಂ ಮುಕ್ತವರ್ಗಂ ನಿನ್ನ ಸೇವಾಸಾಮ್ರಾಜ್ಯದೊಳ್ ನಿರವಧಿಕಾನಂದಮನೆಸಗುತ್ತೆ ಚಿತ್ತದೊಳ್ ಪೊಣ್ಮಿದ ಅಕಸ್ಮಿಕದಯೆಯಿಂ ಪ್ರಳಯಕಾಲದೊಳವ್ಯಕ್ತಸೂಕ್ಷ್ಮಪ್ರಕೃತಿಯೊಳಡಂಗಿ ಮೇಣದೊಳ್ ಪುಗಿದ ಚಿನ್ನದೊರೆವುಡಿಯಂತೆ ರೂಪಬಾದಿರ್ಪ ಬದ್ಧಾತ್ಮವರ್ಗಮುಂ ನಿತ್ಯ ಮುಕ್ತರಂತೆ ಮೋಕ್ಷಾನಂದಮನೊಳಿಸವೇಳ್ಪುದೆಂದು ನಿನ್ನ ಸತ್ಯಸಂಕಲ್ಪದಿಂ ಪ್ರಕೃತಿಯೊಳ್ ಪೊಕ್ಕು ಮಹದಹಂಕಾರಗಳಂ ಪಂಚತನ್ಮಾತ್ರೆಗಳಂ ಪಞ್ಚ ಮಹಾಭೂತಂಗಳನುಂಟುಮಾಡಿ ಅವಱಿಂ ಬ್ರಹ್ಮಾಂಡಮನೊಡರ್ಚಿ ಅದಱೊಳ್ ಬ್ರಹ್ಮಾದಿಸುರರುಂ ನರರುಂ ತಿರ್ಯಕ್ಕುಗಳುಂ ಸ್ಥಾವರಂಗಳುಮೆಂದು ನಾಲ್ಕುಂ ತೆಱದೊಳವರವರ ಪೂರ್ವಕರ್ಮಾನುಗುಣಮಾದ ದೇಹಂಗಳಂ ತತ್ತದ್ದೇಹೋಚಿತಮಾದ ಜ್ಞಾನಶಕ್ತ್ಯಾದಿಗಳುಮನಿತ್ತು ನೀನಿತ್ತಕರಣಕಳೇಬರಾದಿಗಳಿಂದೆ ಅವರ್ ಏನಾನುಂ ಪೊಲ್ಲದುದಂ ಎಸಗಿ ಪುರುಳಱಿಯದಂತೆ ತಕ್ಕುದಿದು ಮಿಕ್ಕುದಿದು ಎಂದು ತಿಳಿಪುವಾವೇದಶಾಸ್ತ್ರಂಗಳನಿತ್ತು ಕರುಣಿಸಿದೈ. ಅಂತಾದೊಡಂ ಒಡೆಯನಾಣತಿವಿಡಿದು ನಡೆಯಲಾಱದ ಜಡರೆಡರಂ ಬಿಡಿಸಿ ಕಾಪಿಡಲ್ಕೆ ಅವರೊಡನೆ ಇಪ್ಪೆನೆಂದು ಮೂರ್ತಿತ್ರಯಮಧ್ಯದೊಳಂ ಕ್ಷೀರಾಬ್ಧಿಯೊಳಂ ಸಗ್ಗಂ

ಮೊದಲಾದ ಬಿಡುಗಣ್ಣರ ಬೀಡುಗಳೊಳಂ ನಿಂದ್ದೈ. ಅಂತಾದೊಡಂ
ದೇವರ್ಗ್ಗಂ ಮುನಿಗಳ್ಗಂ ಯೋಗಿಗಳ್ಗಮಲ್ಲದೆ ಮಿಕ್ಕಮನುಜಾದಿಗಳ್ಗೆ ಪತ್ತಿ
ಸಾರಲುಂ ಸಲ್ಲದುದಱಿಂ ಮನುಜರೊಳಾಬಾಲಗೋಪಾಲಕರ್ಗಂ ಕಱು
ತುಱು ಕರಡಿ ಮುಸು ಕೋಡಗಂ ಮೊದಲಾದ ತಿರ್ಯಗ್ಜಾತಿಗಳ್ಗಂ ಸೇರಿ
ಬರ್ದುಂಕುವಂತೆ ರಾಮಕೃಷ್ಣಾದ್ಯವತಾರಂಗಳಂ ತಳೆದ್ದೈ. ಅಂತಾದೊಡ
ಮಾಯಾ ದೇಶದೊಳಂ ಆಯಾ ಕಾಲದೊಳಂ ಇರ್ಪರ್ಗ್ಗಲ್ಲದೆ ಉೞಿದರ್ಗೆ
ಉಪಕಾರಮಲ್ತೆಂಬುದಱಿಂ ಸರ್ವ್ವದೇಶಸರ್ವ್ವಕಾಲಸರ್ವ್ವಾವಸ್ಥೆಯೊಳಿರ್ಪ ಸ
ರ್ವ್ವಚೇತನಾಚೇತನವರ್ಗ್ಗದೊಳ್ ವ್ಯಾಪಿಸಿದ್ರ್ದ ಮನೋವಾಕ್ಕಾಯಂಗಳಂ
ಪ್ರೇರಿಸುತ್ತೆ ಅನ್ತರ್ಯ್ಯಾಮಿಯೆನಿಸಿದ್ದೈ. ಅಂತಾದೊಡಂ ಎತ್ತಾನುಂ ಓರ್ವ್ವಂ
ಗೆ ಅನೇಕಜನ್ಮಸಾಧ್ಯಯೋಗಧ್ಯಾನ ವಿಷಯನೆಂಬುದಲ್ಲದೆ ಮಿಕ್ಕೆಲ್ಲರ್ಗಂ
ಒಡನಿರ್ದುಂ ಇಲ್ಲದಂತಾದುದಱಿಂ ಸಕಲಜನಮುಂ ಚರ್ಮಚಕ್ಷುಸ್ಸಿಂ
ದಮೇ ಸಾಕ್ಷಾತ್ಕರಿಸಿ ತಂತಮ್ಮ ಮನಮೊಳಸಿದ ಸೇವೆಗಳನೆಸಗಿ ಕೃತಾರ್ಥ
ರಪ್ಪಂತೆ ಸರ್ವ್ವಸುಲಭಮೆನಿಸಿದ ಅರ್ಚಾವತಾರಮನೆಸಗಿ ಕೆಲವುಂ ಕಾಲಂ
ಸತ್ಯಲೋಕದೊಳ್ ಬ್ರಹ್ಮನಿಂ ಪೂಜೆಗೊಂಡು ಬೞಿಕ್ಕೆ ಸನತ್ಕುಮಾರಂ
ಗೊಲ್ದು ಆತನೊಡನುತ್ತರಬದರಿಕಾಶ್ರಮಕ್ಕೆ ಬಂದು ಅಲ್ಲಿ ಸಾಕ್ಷಾದಷ್ಟಾಕ್ಷ
ರೋಪದೇಶ ದೇಶಿಕನೆನಿಸಿ ನಿನ್ನ ರೂಪಾನ್ತರಮಾದ [1]ನರಮುನಿಯಿಂದ
ರ್ಚನಂಬೆತ್ತು ಮತ್ತಮೀ ಕರ್ಣಾಟಮಂಡಲಮಂಡನಮೆನಿಪ ಯದುಶಿಖ
ರಿಶಿಖರಮಂ ನೆಲೆವೀಡುಗೊಂಡು ನಿಂದು ಸಕಲಜನರಕ್ಷಣದೀಕ್ಷಿತನೆನಿ
ಸಿದ್ದೈ. ಅಂತು ಸರ್ವ್ವಜನ ಸಾಧಾರಣಮಲ್ಲದೆ ಈ ಯದುವಂಶದೊಳ್
ಪುಟ್ಟಿದವರ್ಗೆ ಕುಲದೇವತೆಯೆನಿಸಿ ದಯಾವಿಶೇಷದಿಂ ಪೊರೆವನಪ್ಪುದಱಿಂ
ದೆನ್ನೊಳಂ ಅಕಾರಣಕರುಣಾಬ್ಧಿಕಲ್ಲೋಲಂಗಳಂ ಕವಿಸಿ ಮನ್ನಿಪುದು
ಮನ್ನಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



[1] ಪಾಠಾಂತರ—ನಾರಾಯಣ.

## ॥ ಎರಡನೆಯ ಬಿನ್ನಪಂ. ॥

ಸಿರಿಯರಸ ನೀನೆ ಜಗಮಂ ।
ಪರಿವಿಡಿಯಿಂ ಪಡೆದು ಪೊರೆದು ಪೊಡೆಯೊಳ್ ಕೊಳ್ವೈ ॥
ಪರಬೊಮ್ಮಮದಱಿನೆಂದೀ ।
ನರಪತಿ ಯದುಗೋತ್ರಪತಿಗೆ ಬಿನ್ನತಿಗೆಯ್ದಂ ॥ ೧೭ ॥

ಪರಬ್ರಹ್ಮಸ್ವರೂಪಾ ! ಈಜಗಮಾವ ವಸ್ತುವಿನಿಂ ಪುಟ್ಟುವುದು, ಆವುದಱಿಂ ಬರ್ದುಂಕಿರ್ಪುದು, ಆವುದಱೊಳಡಂಗುವುದು, ಆ ವಸ್ತುವೇ ಪರಬ್ರಹ್ಮಮೆಂದು ಕುಱುಪುಗೆಯ್ದು, ಇಂತಪ್ಪ ಜಗತ್ಕಾರಣವಸ್ತುವುಂ ನೀನೇ ಎಂದು ವೇದಾಂತಂಗಳ್ ಪಲವುಂ ತೆಱದೊಳ್ ಸಾಮಾನ್ಯ ವಿಶೇಷಶಬ್ದಂಗಳಿಂ ನಿನ್ನನೆ ಪೊಗಳ್ದುವು. ಇಂತಿರ್ಪ ನೀಂ ಮಹದಾದಿ ತತ್ವಕ್ರಮದಿಂ ಪಞ್ಚ ಮಹಾಭೂತಂಗಳನುಂಟುಮಾಡಿ ಅವಱಿಂ ಬ್ರಹ್ಮಾಣ್ಡಮಂ ಸಮೆದು ಅವಱೊಳ್ ಬ್ರಹ್ಮಾದಿದೇವತೆಗಳಂ ಸೃಜಿಸಿ ಅವರವರ್ಗೊಂದೊಂದಧಿಕಾರಮಂ ಮಿತಿಮಾಡಿ ಕೆಲಂಬರಂ ಸೃಷ್ಟಿ ಸ್ಥಿತಿ ಸಂಹಾರಂಗಳಪ್ಪ ನಿನ್ನಾಟಗದೊಳ್ ನಿಯಮಿಸಿದೈ. ಅವರುಂ ಜಗದೊಳೇಕದೇಶಮಂ ನಿನ್ನನುಮತಿವಿಡಿದು ಪುಟ್ಟಿಪುದುಂ ಪೊರೆವುದುಂ ಅೞಿಯಿಪುದುಂ ಆಗಿರ್ಪುದಱಿಂ ಅವರಂ ಕೊಂಡಾಡುವೆಡೆಯೊಳ್ ನಾಲ್ಮೊಗನೇ ಜಗತ್ಕಾರಣಮೆಂದುಂ ರುದ್ರನೇ ಜಗತ್ಕಾರಣಮೆಂದುಂ ಕೊಂಡಾಡುವರ್. ಈ ನೆಲೆಯಂ ತಿಳಿಯದವರ್ ಭ್ರಮಿಸುವರ್ ಓರ್ವನಂ ಸ್ತುತಿಗೆಯ್ವ ಪ್ರಸ್ತಾಪಮಿಲ್ಲದೆ ಜಗತ್ಸೃಷ್ಟಿಕ್ರಮಮಂ ಪೇೞ್ವೆಡೆಯೊಳ್ ವಿಚಾರಿಸೆ, ಆದಿಯೊಳ್ ನಾರಾಯಣನೊರ್ವನೇ ಉೞಿದಿರ್ದನೆಂದುಂ ಅವನ ನಾಭೀಪದ್ಮದೊಳ್ ಬ್ರಹ್ಮನೊಗೆದನೆಂದುಂ ಅವನ ಪಣೆಯ ಬೆಮರಿಂ ರುದ್ರಂ ಪುಟ್ಟಿದನೆಂದುಂ ಪೇೞ್ದುದದಱಿಂ ನೀನೇ ಜಗದಾದಿಕಾರಣಮಾದ ಪರಬ್ರಹ್ಮಮೆಂಬುದಂ ಸಾತ್ವಿಕರಿಂ ತಿಳಿದೆನ್ನತಾಪತ್ರಯಮಂ ಕಳೆಯಲೆಂದು ನಿನ್ನಡಿನೆೞಲಂ ಸೇರಿದೆಂ; ಎನ್ನಂ ತಣ್ಪುಗೊಳಿಪುದು ತಣ್ಪುಗೊಳಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಮೂಱನೆಯ ಬಿನ್ನಪಂ ॥

ಅಗಣಿತಕಲ್ಯಾಣಗುಣಾ ।
ದಿಗಳಿಂತೆಂದಳವುಗೆಯ್ಯಲರಿದಾದೊಡಮೇಂ ॥
ಬಗೆವುಗುಮೈ ನೀನೆಂದಾ ।
ಜಗದಾಣ್ಮಂಗಣ್ಮಿನಾಣ್ಮನೆಱಕದೊಳೊಱೆದಂ ॥ ೧೮ ॥

ಅಪ್ರಮೇಯಾ! ಜಗದೊಳ್ ಪ್ರಮೇಯಮೆನೆ—ತಿಳಿಯಲ್ತಕ್ಕ ವಸ್ತು. ಆ ವಸ್ತುವಂ ತಿಳಿವ ಪ್ರಮಾಣಂಗಳ್ ಪ್ರತ್ಯಕ್ಷಮೆಂದುಂ, ಅನುಮಾನಮೆಂದುಂ, ಶಬ್ದಮೆಂದುಂ ಮೂಱುಂ ತೆಱನಾಗಿರ್ಕುಂ. ಅವಱೊಳ್ ಪ್ರತ್ಯಕ್ಷಮೆನೆ—ಇನ್ದ್ರಿಯಾರ್ಥಸಂಬನ್ಧದಿಂ ಪುಟ್ಟುವ ತಿಳಿವು. ಇದುಮಾಱುಂ ತೆಱನಾಗಿರ್ಕುಂ ಅದೆಂತೆನೆ:—ಕಣ್ದೆಱೆದೊಂದು ವಸ್ತುವಂ ನೋಡೆ ಈ ವಸ್ತು ಕಱಿದಿದು ಬಿಳಿದು ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಚಾಕ್ಷುಷಪ್ರತ್ಯಕ್ಷಮೆನಿಪುದು. ಕಿವಿಯಿಂದಾಲಿಸೆ, ಇದೀಬಗೆಯ ದನಿ ಇದೀಬಗೆಯ ನುಡಿ ಇದೀಯಕ್ಕರಂ ಎಂದಿವು ಮುಂತಾಗಿ ಪುಟ್ಟುವ ತಿಳಿವು ಶ್ರಾವಣಪ್ರತ್ಯಕ್ಷಮೆನಿಪುದು. ನಾಲಗೆಯಿಂ ಸವಿಯೆ, ಇದು ಮಧುರಂ ಇದು ಪುೞಿ ಇದುಪುರ್ ಎಂದಿವು ಮುಂತಾಗಿ ಪುಟ್ಟುವ ತಿಳಿವು ಜಿಹ್ವಾಪ್ರತ್ಯಕ್ಷಮೆನಿಪುದು. ನಾಸಿಕದಿಂದೊಂದನಾಘ್ರಾಣಿಸೆ, ಇದು ನಲ್ಗಂಪು ಇದು ಪೊಲಸುಗಂಪು ಎಂದಿವು ಮೊದಲಾಗಿ ಪುಟ್ಟುವ ತಿಳಿವು ಘ್ರಾಣಪ್ರತ್ಯಕ್ಷಮೆನಿಪುದು. ಮೆಯ್ಯೊಡಲಂಸೋಂಕೆ ಇದು ಬಿಸುವು ಇದು ತಣ್ಪು ಎಂದಿವು ಮೊದಲಾಗಿ ಪುಟ್ಟುವ ತಿಳಿವು ಸ್ಪಾರ್ಶನಪ್ರತ್ಯಕ್ಷಮೆನಿಪುದು. ಮನಸ್ಸಿನೊಳ್ ಭಾವಿಸೆ, ತನಗೀಗಳ್ ಸುಖಮಾಗಿರ್ಕುಂ, ಈಗಳ್ ದುಃಖಮಾಗಿರ್ಕುಂ ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಮಾನಸಪ್ರತ್ಯಕ್ಷಮೆನಿಪುದು. ಇಂತು ಪ್ರತ್ಯಕ್ಷಮಾಱುಂತೆಱನಾಗಿರ್ಕುಂ. ಅನುಮಾನಮೆಂಬುದು—ಪೆಱತೊಂದುವನುೞಿದು ತಾನೊಂದೆಡೆಯೊಳಮಿರದವಸ್ತುವಂ ಕಂಡು ಆಯೆಡೆಯೊಳ್ ಪೆಱತೊಂದ ತಿಳಿವುದು. ಅದೆಂತೆನೆ:—ಬೆಂಕಿಯನುೞಿದು ಪೊಗೆಯಿರದೆಂಬ ನೇಮಮಂ ಅಡಿಗೆಮನೆಯೊಳ್ ನಿಶ್ಚ

ಯುಂಗೆಯ್ದು ಬೆಟ್ಟ ಮೊದಲಾದ ಪೆಱತೊಂದೆಡೆಯೊಳ್ ಪೊಗೆಯಂ ಕಂಡು ಅಲ್ಲಿ ಬೆಂಕಿಯುಂಟೆಂದು ತಿಳಿವುದು ಅನುಮಾನಪ್ರಮಾಣಮೆನಿಪ್ಪುದು. ಶಬ್ದಪ್ರಮಾಣಮೆನೆ:—ಇದರ್ಱದನಿರ್ದಂತೆ ತಿಳಿಪುವ ನುಡಿ. ಅದುಂ ಲೌಕಿಕಮೆಂದುಂ ವೈದಿಕಮೆಂದುಂ ಎರಡುಂ ತೆಱನಾಗಿರ್ಕುಂ. ಲೌಕಿಕಮೆಂಬುದು ಲೋಕದೊಳಾಪ್ತರ್ ನುಡಿವ ನುಡಿ. ವೈದಿಕಮೆಂಬುದು ವೇದಂ ಮೊದಲಾದ ಪದಿನಾಲ್ಕುಂ ವಿದ್ಯೆಗಳ್. ಈ ಪ್ರತ್ಯಕ್ಷಾನುಮಾನಶಬ್ದಂಗಳೆಂಬ ಮೂಱುಂ ಪ್ರಮಾಣಂಗಳಿಂದಂ ನಿನ್ನ ಸ್ವರೂಪರೂಪಗುಣ ವಿಭವಾದಿಗಳೊಳಿನಿಸಿನಿಸಂ ತಿಳಿವುದಲ್ಲದೆ, ಇಂತೆಂದು ಪರಿಚ್ಛೇದಂಗೆಯ್ವುದರಿದಾದುದಱಿಂ ನೀನಪ್ರಮೇಯನೆನಿಸುವೈ. ಆದೊಡಂ ನಿನ್ನ ಭಕ್ತಸುಲಭತೆಯಂ ಮೆಱೆದೆನ್ನೆರ್ದೆವನೆಯೊಳ್ ನೆಲೆಗೊಂಬುದು ನೆಲೆಗೊಂಬುದನನ್ಯಜನಸುಲಭ, ಶ್ರೀಯಡುಶ್ಶೈಲವಲ್ಲಭಾ !



## ॥ ನಾಲ್ಕನೆಯ ಬಿನ್ನಪಂ. ॥

ವೇದ ತದೇಕಾರ್ಥ ಪುರಾ ।
ಣಾದಿಗಳೊಳ್ ವ್ಯಕ್ತಮಾಗಿ ತೋರ್ಪೈ ನೀನೆಂ ॥
ದಾದರದಿಂದೆ ಸುಶೀಲಂ ।
ಯಾದವಗಿರಿನಾಥನಡಿಗೆ ಬಿನ್ನತಿಗೆಯ್ದಂ ॥ ೧೯ ॥

ಸಕಲವಿದ್ಯಾ ಪ್ರವರ್ತಕಾ ! ವಿದ್ಯೆಗಳ್—ವೇದಂಗಳ್ ನಾಲ್ಕುಂ ಅಂಗಂಗಳಾಱುಂ, ತರ್ಕಮುಂ, ಮೀಮಾಂಸೆಯುಂ, ಪುರಾಣಮುಂ, ಧರ್ಮಶಾಸ್ತ್ರಮುಂ, ಆಯುರ್ವೇದಮುಂ, ಧನುರ್ವೇದಮುಂ, ಗಾಂಧರ್ವಮುಂ, ಅರ್ಥಶಾಸ್ತ್ರಮುಮೆಂದು ಪದಿನೆಂಟುಂ ತೆಱನಾಗಿರ್ಪುವು. ಅವಱೊಳ್ ಋಗ್ಯಜುಸ್ಸಾಮಾಥರ್ವಣಂಗಳೆಂಬ ನಾಲ್ಕುಂ ವೇದಂಗಳುಂ ಪೂರ್ವಭಾಗದೊಳ್ ಧರ್ಮಾರ್ಥಕಾಮಮೆಂಬ ತ್ರಿವರ್ಗಕ್ಕೆ ಸಾಧನಮಾದ ಕರ್ಮಮಂ ಪೇೞ್ವುದು ; ಉತ್ತರಭಾಗದೊಳ್ ನಿನ್ನ ಸ್ವರೂಪ ರೂಪ ಗುಣ ವಿಭವಾದಿಗಳಂ ಪೇೞ್ದು ಮೋಕ್ಷೋಪಾಯಮಂ ತೋಱುಸುಗುಂ. ಅಂಗಂಗಳೊಳ್ ಶಿಕ್ಷೆಯೆಂಬುದು—ಸ್ವರವರ್ಣಮಾತ್ರಾದಿಗಳಂ ನಿರೂಪಿಸುವುದು. ವ್ಯಾಕರಣಮೆಂಬುದು—ಪ್ರಕೃತಿ ಪ್ರತ್ಯಯಾದಿ ಮುಖದಿಂದ ಅರ್ಥಮಂ ಪೇೞ್ವ ಪದಂಗಳಂ ನಿರೂಪಿಸುವುದು. ಛಂದಸ್ಸೆಂಬುದು—ಗಾಯತ್ರಿತ್ರಿಷ್ಟುಪ್ಪನುಷ್ಟುಪ್ಪು ಮೊದಲಾದ ಛಂದೋಲಕ್ಷಣಮಂ ನಿರೂಪಿಸುವುದು. ಕಲ್ಪಸೂತ್ರಮೆಂಬುದು ವೇದೋಕ್ತ ಕರ್ಮಪ್ರಯೋಗಮಂ ನಿರೂಪಿಸುವುದು. ಜ್ಯೋತಿಷಮೆಂಬುದು ಕರ್ಮಾಚರಣಕ್ಕೆ ಕಾಲಮಂ ನಿರೂಪಿಸುವುದು. ವೇದಪುರುಷಂಗೆ ಛಂದಸ್ಸು ಪಾದಂಗಳುಂ, ಕಲ್ಪಸೂತ್ರಂ ಕೆಯ್ಗಳುಂ, ವ್ಯಾಕರಣಂ ಮೊಗಮುಂ, ಶಿಕ್ಷೆ ಘ್ರಾಣಮುಂ, ಜ್ಯೋತಿಷಂ ಕಣ್ಗಳುಂ, ನಿರುಕ್ತಂ ಕಿವಿಗಳುಮಾಗಿರ್ಪುದಱಿಂದಿವಾಱುಂ ವೇದಾಂಗಂಗಳೆನಿಪುದು. ತರ್ಕಮೆಂಬುದು—ವೇದಾರ್ಥಂಗಳಂ ಯುಕ್ತಿಗಳಿಂ ನೆಲೆಗೆಯ್ವುದು. ಮೀಮಾಂಸೆಯೆಂಬುದು—ವೇದಾರ್ಥಂಗಳಂ ಪೂರ್ವಪಕ್ಷ ಸಿದ್ಧಾಂತ ರೂಪದಿಂ ವಿಚಾರಿಸಿ ನಿಶ್ಚಯಂಗೆಯ್ವುದು. ಪುರಾಣಂಗಳೆಂಬುವು—ಜಗತ್ಸೃ

ಷ್ಟಿಯುಂ ಸಂಹಾರವುಂ ಮನ್ವಂತರಂಗಳುಮಂ ವಂಶಮುಂ ವಂಶದೊಳ್ ಪುಟ್ಟಿದವರ ಚರಿತ್ರಮುಮಂ ಪೇಳ್ದಿಬ್ರಾಹ್ಮಂ ಪಾದ್ಮಂ ಮೊದಲಾದ ಪದಿನೆಂಟುಂ ತೆಱನಾಗಿರ್ಕುಂ. ಧರ್ಮಶಾಸ್ತ್ರಮೆಂಬುದು— ಆಚಾರ ವ್ಯವಹಾರ ಪ್ರಾಯಶ್ಚಿತ್ತಂಗಳಂ ಪೇಳ್ವ ಮನು ಯಾಜ್ಞವಲ್ಕ್ಯಂ ಮೊದಲಾಗಿ ಪದಿನೆಂಟುಂ ತೆಱನಾಗಿರ್ಕುಂ. ಆಯುರ್ವೇದಮೆಂಬುದು–ವ್ಯಾಧಿನಿದಾನಚಿಕಿತ್ಸಾದಿಗಳಂ ನಿರೂಪಿಸುವದು. ಧನುರ್ವೇದಮೆಂಬುದು— ಅಸ್ತ್ರಶಸ್ತ್ರ ಪ್ರಯೋಗೋಪಹಾರಾದಿಗಳಂ ನಿರೂಪಿಸುವುದು. ಗಾಂಧರ್ವಮೆಂಬುದು— ನೃತ್ತಗೀತ ವಾದ್ಯಾದಿಗಳಂ ನಿರೂಪಿಸುವುದು. ಅರ್ಥಶಾಸ್ತ್ರಮೆಂಬುದು– ಪ್ರಜಾಪರಿಪಾಲನಾದಿ ರಾಜನೀತಿಗಳಂ ನಿರೂಪಿಸುವುದು ಈ ಪದಿನೆಂಟು ವಿದ್ಯೆಗಳಂ ನೀನೇ ಲೋಕಹಿತಾರ್ಥವಾಗಿ ನೆಗಟ್ದುದುದಱಿಂ ನೀನೇ ಸಕಲವಿದ್ಯಾಪ್ರವರ್ತಕನೆನಿಸುವೈ. ಇನಿತುಂ ವಿದ್ಯೆಗಳೊಳಂ ಪ್ರಧಾನಮಾದ ವೇದಾಂತದೊಳ್ ಪ್ರಕಾಶಮಾದ ನಿನ್ನ ಸ್ವರೂಪಮಂ ತಿಳಿಪಿ ಎನ್ನ ಮನದ ಜಡರಂ ಕಳೆದು ನಿನ್ನಡಿಯೊಳ್ ಜ್ಞಾನಭಕ್ತಿಗಳಂ ಬಲಿಯಿಪುದು ಬಲಿಯಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಐದನೆಯ ಬಿನ್ನಪಂ. ॥

ಸಕಲಜಗದ್ವ್ಯಾಪಾರಂ ।
ಸಕಲಾತ್ಮಕ ನಿನ್ನದಾಗೆ ವೇದಂ ಸಕಲಂ ॥
ಪ್ರಕಟಿಪುದು ನಿನ್ನನೆಂದಾ ।
ಸುಕಲಂ ಯದುಶೈಲಪತಿಗೆ ಬಿನ್ನತಿಗೆಯ್ದಂ ॥ ೨೦ ॥

ಸಕಲ ವೇದವೇದ್ಯಾ ! ವೇದಂಗಳ್—ಪೂರ್ವಭಾಗದೊಳ್ ಯಜ್ಞಾದಿ ಸತ್ಕರ್ಮಂಗಳಂ ಸಾಂಗವಾಗಿಯಾಚರಿಸುವ ಕ್ರಮಮಂ, ಅದ ಱಿಂದೊಳ್ ಬರ್ಪ ಫಲಮಂ ಪೇೞ್ದಪುದು ; ಉತ್ತರಭಾಗದೊಳ್ ಸಂಸಾರ ಮಂ ಜಱೆದು, ಜೀವಸ್ವರೂಪಮಂ ಪರಬ್ರಹ್ಮಸ್ವರೂಪಮಂ ನಿರೂಪಿಸಿ, ಮೋಕ್ಷೋಪಾಯಮಂ ವಿಧಿಸಿ, ಮೋಕ್ಷಾನಂದಮಂ ಪೊಗೞ್ದಪುದು. ಇಂತು ನಾನಾವಿಧವಾಗಿರ್ಪ ವೇದಮನಿತುಂ ನಿನ್ನನೇ ಪೊಗೞ್ದಪುದೆಂದು ಪಿರಿ ಯರ್ ಪೇೞ್ದರ್. ಆ ನೆಲೆಯುಂ ಭಾವಿಸೆ, ಲೋಕದೊಳ್ ಕೈವಾರಿಗಳ ರಸನಂ ಪೊಗೞ್ವೆಡೆಯೊಳ್ ನಾಡುಬೀಡುಗರ್ ಅರಸನಾಣತಿವಿಡಿದು ನಡೆವ ಬಗೆಯುಂ, ಅದಱೊರ್ಲಿದರಸನವರ್ಗೆ ತಕ್ಕುದನೀವ ಬಗೆಯುಂ, ಆಳ್ಗಳ ನೆಲೆಯುಂ, ಅರಸನ ನೆಲೆಯುಂ, ಅರಸನ ಸಮ್ಮುಖಮಂ ಪಡೆವ ತೆಱನಂ, ಸಮ್ಮುಖದೊಳಿರ್ಪರ ಸುಖಮಂ ಬಣ್ಣಿಸಿದೊಡಂ ಅರಸನನೆ ಪೊಗೞ್ದರೆಂಬರ್. ಇಂತು ವರ್ಣಾಶ್ರಮದವರೆನಿಪ ನಿನ್ನ ನಾಡುಬೀಡು ಗರೊಡರ್ಚುವ ಯಜ್ಞಾದಿ ಕರ್ಮಂಗಳೆನಿಪ ನಿನ್ನಾಣತಿಯಾಳ್ತಗಮಂ, ಅದಱೊರ್ಲ್ದು ನೀಂ ಕೊಡುವ ಐಹಿಕಾಮುಷ್ಮಿಕ ಫಲಮೆನಿಪ ಜೀವಿತಮಂ, ಜೀವಾತ್ಮರೆನಿಪ ನಿನ್ನೋಲಗದವರ ನೆಲೆಯುಂ, ಪರಬ್ರಹ್ಮಮೆನಿಪ ನಿನ್ನ ನೆಲೆಯುಂ, ಮೋಕ್ಷೋಪಾಯಮೆನಿಪ ನಿನ್ನ ಸಮ್ಮುಖಮಂ ಪಡೆಯ ಲ್ತಕ್ಕ ನಡತೆಯುಂ, ಮೋಕ್ಷಾನಂದಮೆನಿಪ ನಿನ್ನ ಸಮ್ಮುಖದೊಳಿರ್ಪಕ ಸುಖಮಂ ನಿರೂಪಿಸುವುದಱಿಂದೀವೇದಮೆಲ್ಲಮುಂ ನಿನ್ನನೆ ಪೊಗೞ್ದ ವೆಂಬುದು ಸಿದ್ಧಂ. ಈಯರ್ಥಮಂ ಚಿತ್ತದೊಳಿಟ್ಟೇ

" ವೇದೈಶ್ಚ ಸರ್ವೈರಹಮೇವ ವೇದ್ಯಃ "

ಎಂದು ಗೀತೆಯೊಳ್ ಪೇೞ್ದುದು. ಇಂತು ವೇದವೇದ್ಯನಪ್ಪ ನಿನ್ನತಿಶಯು ಮನೆ ಸಕಲಸ್ಮೃತೀತಿಹಾಸಪುರಾಣಾಗಮಂಗಳುಂ ಬಣ್ಣಿಪುವು. ಬಣ್ಣಿಸಿಯುಂ ಕಡೆಗಾಣಲಾಱವೆನೆ, ಮಿಕ್ಕಿನ ಮಾನಸರ್ ಸ್ವಯತ್ನದಿಂ ನಿನ್ನ ನೆಲೆಯಂ ತಿಳಿದು ಭಜಿಸಿ ಕಡೆಗಾಣ್ಬರೆಂಬುದು ಮನೋರಥಮಾತ್ರಮೆ. ಅದಱಿಂ ನೀನೆ ದಯೆಗೆಯ್ದು ನಿನ್ನ ಸ್ವರೂಪಮಂ ತಿಳಿಪಿ ಎನ್ನಂ ನಿನ್ನೊ ೞಂಗದವನೆನಿಪುದೆನಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಆಱನೆಯ ಬಿನ್ನಪಂ. ॥

ಪಡಿಬಱಿಸಿ ತೋರ್ಪ ವೇದದ ।
ನುಡಿಗಳುಮವಿರುದ್ಧಮಕ್ಕುಮುಪದೇಶದೊಳೆಂ ॥
ದಡಿಗೆಱಗಿ ಬಿನ್ನವಿಸಿದಂ ।
ಪೊಡೆಯುಲರಂಗರಿನೃಪಾಲಮಸ್ತಕಶೂಲಂ ॥ ೨೧ ॥

ಅದ್ಭುತಚರಿತಾ! ವೇದಂಗಳ್ ನಿನ್ನ ಸ್ವರೂಪರೂಪಗುಣವಿಭವಂಗಳಂ ಪಲವೆಡೆಯೊಳ್ ಪಲವುಂ ತೆಱದಿಂ ಪೇೞ್ದು ತಿಳುಪ್ಪುಗುಂ. ಗುರುಮುಖದಿಂ ಕೇಳ್ವರ್ಗೆ ಈಯರ್ಥಂ ಸುವ್ಯಕ್ತವಾಗಿ ತೋರ್ಕುಂ. ತಮ್ಮ ಬುದ್ಧಿಬಲದಿಂದೂಹಿಸುವರ್ಗೆ ಪರಸ್ಪರ ವಿರುದ್ಧಮಾಗಿ ತೋರ್ಕುಂ. ಅದೆಂತೆನೆ:—ನಿನ್ನಂ ಸಗುಣನೆಂದುಂ ನಿರ್ಗುಣನೆಂದುಂ, ಪಿರಿದರ್ಕಂ ಪಿರಿಯನೆಂದುಂ ಕಿಱಿದರ್ಕಂ ಕಿಱಿಯನೆಂದುಂ, ಸಾಕಾರನೆಂದುಂ, ನಿರಾಕಾರನೆಂದುಂ, ಅವಾಙ್ಮನಸಗೋಚರನೆಂದುಂ, ವೇದವೇದ್ಯನೆಂದುಂ, ಪುಟ್ಟು ಪೊಂದುಗಳಿಲ್ಲದವನೆಂದುಂ, ಮತ್ಸ್ಯಾದಿರೂಪಂಗಳಿಂ ಪುಟ್ಟಿದವನೆಂದುಂ, ಪೇೞೆ ಮಂದಮತಿಗಳ್ಗೆ ವಿರೋಧಂ ತೋರ್ಪುದಱಿಂ ನಿಶ್ಚಯಂ ಪುಟ್ಟದು. ಪಿರಿಯರುಪದೇಶದಿಂ ತಿಳಿವರ್ಗೆ ಈ ವಿರೋಧಮೆಂದುಂ ತೋಱದು. ಸಗುಣನೆನೆ—ವಾತ್ಸಲ್ಯಾದಿ ಗುಣಂಗಳುಳ್ಳವನೆಂದುಂ, ನಿರ್ಗುಣನೆನೆ—ರಾಜಸತಾಮಸಾದಿಗಳಿಲ್ಲದವನೆಂದುಂ ತೋರ್ಪುದಱಿಂ ಸದ್ಗುಣಂಗಳನಿತುಮೊಳವು, ದುರ್ಗುಣಂಗಳೊಂದುಮಿಲ್ಲೆಂದು ನಿರ್ಣಯಮಕ್ಕುಂ. ಪಿರಿದರ್ಕಂ ಪಿರಿಯನೆನೆ—ಪದಿನಾಲ್ಕುಂ ಲೋಕಂಗಳುಂ ತನ್ನುದರದೊಳ್ ಕೊಣ್ಡವನೆಂದುಂ, ಕಿಱಿದರ್ಕಂ ಕಿಱಿಯನೆನೆ—ಕಿಱಿದಾದ ಜೀವಾತ್ಮನೊಳಂತರ್ಯಾಮಿಯಾಗಿರ್ಕುಮೆಂದುಂ ತೋರ್ಪುದಱಿಂ ಸಕಲಪದಾರ್ಥಂಗಳೊಳಗುಂ ಪೊಱಗುಂ ವ್ಯಾಪಿಸಿರ್ಪನೆಂದು ನಿಶ್ಚಯಮಕ್ಕುಂ. ಸಾಕಾರನೆನೆ—ಅಪ್ರಾಕೃತ ಶರೀರಮುಳ್ಳವನೆಂದುಂ, ನಿರಾಕಾರನೆನೆ—ಸಕಲ ಹೇಯಾಸ್ಪದಮಪ್ಪ ಪ್ರಾಕೃತಶರೀರಮಿಲ್ಲದವನೆಂದುಂ, ತೋರ್ಪುದಱಿಂ ತನ್ನ ಸ್ವರೂಪಕ್ಕನುಗುಣಮಾಗಿ ತನ್ನಿಚ್ಛಾನುಗುಣಮಾಗಿರ್ಪ ದಿವ್ಯಮಂಗಳವಿಗ್ರಹ

ವುಳ್ಳವನೆಂದುಂ ವ್ಯಕ್ತಮಕ್ಕುಂ. ಅವಾಙ್ಮನಸಗೋಚರನೆನೆ—ಸ್ವರೂಪ ಮುಂ ವಿಗ್ರಹಮುಂ ಗುಣಂಗಳುಂ ಐಶ್ವರ್ಯಮುಮಿನಿತೆಂದು ಮಿತಿಗೆಯ್ದು ನುಡಿಯಲುಂ ತಿಳಿಯಲುಂ ಶಕ್ಯನಲ್ಲೆಂಬುದು. ವೇದವೇದ್ಯನೆನೆ—ಶ್ರೀಯಃ ಪತಿಯುಂ ಅಖಿಲಹೇಯಪ್ರತ್ಯನೀಕನುಂ ಜಗತ್ಕಾರಣನುಂ ಸರ್ವಾಂತರ್ಯಾ ಮಿಯುಂ ಮೋಕ್ಷಪ್ರದನೆಂಬಿವು ಮೊದಲಾದ ಮಹಿಮೆಗಳುಂ ವೇದ ದೊಳ್ ತಿಳಿಯಬರ್ಕುಮೆಂದು ತೋರ್ಪುದಱಿಂ ತಾನ್ತಿಳಿವನಿತುಮಂ ತಿ ಳಿದು ಇನ್ನುಂ ಮಹಿಮೆಗಳುಂಟೆಂದಿರವೇಟ್ಪುದೆಂಬುದು ದೃಢಮಾದುದು. ಪುಟ್ಟುಪ್ಪೊಂದುಗಳಿಲ್ಲನೆನೆ—ಕರ್ಮಾಧೀನಮಾದ ಜನನಮಿಲ್ಲೆಂದುಂ. ಮತ್ಸ್ಯಾ ದಿರೂಪದಿಂ ಪುಟ್ಟಿದನೆನೆ—ದುಷ್ಟನಿಗ್ರಹ ಶಿಷ್ಟಪರಿಪಾಲನ ಧರ್ಮಸಂಸ್ಥಾಪ ನಾರ್ಥವಾಗಿ ತನ್ನಿಚ್ಛೆಯಿಂ ಮನುಷ್ಯಾದ್ಯಾಕಾರದಿಂದಾವಿರ್ಭವಿಸುವ ನೆನ್ದುಂ ತೋರ್ಪುದಱಿಂ ಕರ್ಮಾಧೀನಮಲ್ತು ಲೋಕಾನುಗ್ರಹಾರ್ಥಮೆನ್ದು ಸಿದ್ಧಮಾಪುದು. ಇಂತು ವಿರೋಧಮಿಲ್ಲದೆ ಸಕಲ ವೇದಾಂತಂಗಳನೊಂ ದುಗೆಯ್ದು ತಿಳಿದವರ್ ನಿನ್ನಂ ಸರ್ವಾಶ್ಚರ್ಯಮಯನೆಂಬರ್. ನಿನ್ನ ನೆಲೆ ಯಂ ನಿರೂಪಿಸಲ್ಕಾನೆನಿತವಂ. ಎನ್ನಂ ನಿನ್ನ ನಿರ್ವ್ಯಾಜದಯಾಮೃ ತಾಬ್ಧಿತರಂಗದೊಳ್ ತೇಲಿಸಿ ಲಾಲಿಪುದು ಲಾಲಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಏಬಿನೆಯ ಬಿನ್ನಪಂ. ॥

ನನ್ನಿ ಜಗವೆಲ್ಲಮುಂ ಕೇಳ್ ।
ನಿನ್ನೊಡಲಾಗಿರ್ಪ ಬಗೆಯೊಳೆಂದು ಯದುಕ್ಷ್ಮಾ ॥
ಭೃನ್ನಾಥನಡಿಗೆ ನಲವಿಂ ।
ಬಿನ್ನತಿಗೆಯ್ದಿಸೆದನೊಲ್ದು ನನ್ನಿಯ ನಲ್ಲಂ ॥ ೨೨ ॥

ಸಮಸ್ತಚಿದಚಿದ್ವಸ್ತು ಶರೀರಕಾ ! ಜಗವೆಲ್ಲಮುಂ ನಿನಗೆ ಶರೀರಮಾಗಿಯುಂ ನೀನೀಜಗಕ್ಕೆ ಪರಮಾತ್ಮನಾಗಿಯುಮಿರ್ಪುದಱಿಂ ಜಗಮೆಲ್ಲಮುಂ ನೀನೊರ್ವನಲ್ಲದೆ ಬೇಱಿಲ್ಲೆನ್ದು ವೇದಶಾಸ್ತ್ರಂಗಳ್ ಪೇೞ್ವುದು. ಆದಱ ತತ್ವಮಂ ತಿಳಿಯದೆ ಕೆಲಂಬರ್ ಭ್ರಮಿಸಿ ಜಗಕ್ಕಂ ನಿನಗಂ ಸ್ವರೂಪಭೇದಮಿಲ್ಲೆನ್ದು ಪೇೞ್ವರ್ ಅವರಾಡುವ ನುಡಿಗಳನಿತುಂ ಯುಕ್ತಿವಿರುದ್ಧಮಾಗಿರ್ಪುವು. ಅದೆನ್ತೆನೆ :—ಲೋಕದೊಳ್ ವಸ್ತುರೂಪಮೆರಡಾಗಿರ್ದು ಎರಡಱಾಕಾರಗುಣಂಗಳೊಂದಾಗಿರ್ದೊಡೆ, ಆವೊಂದೇ ವಸ್ತುವಂ ಕಂಡು ಇದರ್ಕಮಿದರ್ಕಂ ಭೇದಮಿಲ್ಲೆಂದು ಬುದ್ಧಿವಂತರ್ ಪೇೞ್ವರ್. ಬ್ರಹ್ಮಕ್ಕಂ ಪ್ರಪಂಚಕ್ಕಂ ಭೇದಮಿಲ್ಲೆಂಬವಂ ಈಪ್ರಪಂಚಮೇ ಬ್ರಹ್ಮಮೆಂದೊಡೆ ಬೇಱೆ ಬ್ರಹ್ಮಮಿಲ್ಲೆಂಬ ಶೂನ್ಯವಾದಿಯಕ್ಕುಂ ; ಬ್ರಹ್ಮಮೇ ಪ್ರಪಂಚಮೆಂದೊಡೆ ಬ್ರಹ್ಮಮೊಂದೆಯಲ್ಲದೆ ಬೇಱೊಂದುಮಿಲ್ಲೆಂದು ನುಡಿವ ತಾನುಂ ತನ್ನ ನುಡಿಯುಂ ತನಗುಪದೇಶವಿತ್ತ ಗುರುವುಂ ಆಗುರುವೋದಿದ ವೇದಾಂತಮುಮಿಲ್ಲೆಂಬುದಱಿಂ ನಾಸ್ತಿಕವಾದಿಯಕ್ಕುಂ. ಇಂತು ಶುದ್ಧಾದ್ವೈತಂ ಶಾಸ್ತ್ರವಿರುದ್ಧಮಾಗಿರ್ದೊಡಂ ನಿನ್ನ ಕಟಾಕ್ಷವಿಷಯರಲ್ಲದ ಮನುಜರ್ ಈ ಪಕ್ಷಮನೆ ಅಂಗೀಕರಿಸಿ ನಿನ್ನ ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿ ತೇಜಸ್ಸೌಶೀಲ್ಯ ವಾತ್ಸಲ್ಯ ಮಾರ್ದವಾರ್ಜವ ಸೌಹಾರ್ದ ಸಾಮ್ಯ ಕಾರುಣ್ಯ ಮಾಧುರ್ಯ ಗಾಂಭೀರ್ಯೌದಾರ್ಯ ಚಾತುರ್ಯ ಸ್ಥೈರ್ಯ ಶೌರ್ಯ ಪರಾಕ್ರಮ ಸತ್ಯಕಾಮ ಸತ್ಯಸಂಕಲ್ಪ ಕೃತಿತ್ವ ಕೃತಜ್ಞತಾದ್ಯಸಂಖ್ಯೇಯ ಕಲ್ಯಾಣಗುಣಗಣಂಗಳುಂ, ದಿವ್ಯಮಂಗಳ ವಿಗ್ರಹಮುಂ, ದಿವ್ಯಭೂಷಣಂಗಳುಂ, ದಿವ್ಯಾಯುಧಂಗಳುಂ, ದಿವ್ಯಮ

ಹಿಷೀವರ್ಗಮುಂ, ನಿತ್ಯಮುಕ್ತರುಂ, ಶ್ರೀ ವೈಕುಂಠಮುಂ—ಇನಿತಿಲ್ಲಂ ಘುಂ, ಮತ್ತಂ ನಿನ್ನ ಲೀಲಾಪರಿಕರಮಾದ ಬ್ರಹ್ಮಾಂಡಮುಂ, ಅದಱೊಳಿರ್ಪ ಪದಿನಾಲ್ಕುಂ ಲೋಕಂಗಳುಂ, ಬ್ರಹ್ಮರುದ್ರಾದಿ ದೇವರ್ಕಳುಂ, ಸಪ್ತದ್ವೀಪಂಗಳುಂ, ಸಪ್ತಸಾಗರಂಗಳುಂ, ಪರ್ವತಂಗಳುಂ, ನದಿಗಳುಂ, ದೇಶಂಗಳುಂ, ಗ್ರಾಮಂಗಳುಂ, ತಮ್ಮಂ ಪೆತ್ತ ತಂದೆತಾಯ್ಗಳುಂ, ತಾಮುಮಿಲ್ಲೆಂದುಂ, ಇಲ್ಲದಿರ್ಪ ವೇದಾಂತಂಗಳಿಂದೆ ಇವೆಲ್ಲಮಂ ತಿಳಿದೆವೆಂದುಂ, ಈ ಪರಿಯೊಳ್ ನಿನ್ನ ನಿತ್ಯವಿಭೂತಿ ಲೀಲಾವಿಭೂತಿಗಳನಪಲಪಿಸುವರ್. ಅವರೊಳ್ ನೀಂ ನೆಲಸಿರ್ಪ ತೆಱನೆಂತೋ! ಅದಂತಿರ್ಕೆ. ನಿನ್ನನೆ ನೆಱೆ ನಂಬಿ ನಿನ್ನ ಕಟಾಕ್ಷಮಂ ಪಡೆದ ಮಹಾತ್ಮರ್ ಸಕಲ ವೇದಶಾಸ್ತ್ರಾನುಗುಣಮುಂ ಯುಕ್ತಿಯುಕ್ತಮುಮಾದ ವಿಶಿಷ್ಟಾದ್ವೈತಮನೆ ಅಂಗೀಕರಿಸಿರ್ಪರ್. ಅದೆಂತೆನೆ:—ಓರ್ವನ ಶರೀರದೊಳ್ ಪೃಥಿವ್ಯಾದಿ ತತ್ವಂಗಳಿರ್ಪತ್ತು ನಾಲ್ಕು ಜೀವಾತ್ಮನುಂ ಅನ್ತರ್ಯಾಮಿಯಾದ ನೀನುಂ ಕೂಡಿ ಇರ್ಪತ್ತಾಱುಂ ತತ್ವಂಗಳಿರ್ದೊಡಂ ಮನುಜನೊರ್ವನಿರ್ದಪನಂತೆ ಈ ಚೇತನಾಚೇತನಂಗಳೆಲ್ಲಮುಂ ಬೇಱಾಗಿರ್ದೊಡಂ ನಿನ್ನ ಶರೀರಮಪ್ಪುದಱಿಂ ನೀನೊರ್ವನೆ ಎಂಬುದು ಯುಕ್ತಂ. ಈ ತತ್ವಜ್ಞಾನಮೆನ್ನ ಮನದೊಳ್ ನೆಲೆಗೊಂಬಂತೆ ನೀಂ ಕರುಣಿಪುದು ಕರುಣಿಪುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ॥ ಎಂಟನೆಯ ಬಿನ್ನಪಂ. ॥

ಕನಸಿನೊಳೀಕ್ಷಿಪ ವಸ್ತುಗ ।
ಳನಿತುಂ ನೀಂ ಸೃಷ್ಟಿಗೆಯ್ದ ಬಗೆಯಿಂ ದಿಟಮೆಂ ॥
ದನುಗೊಳಿಸಿ ಬಿನ್ನವಿಸಿದಂ ।
ಮನವೊಲ್ದಸುರಾರಿಯಡಿಗೆ ಮಲೆವರ ಗಂಡಂ ॥ ೨೩ ॥

ಅಘಟಿತ ಘಟನಾಸಮರ್ಥಾ ! ಮನುಜರ್ಗೆ ಜಾಗರ ಸ್ವಪ್ನ ಸುಷುಪ್ತಿಗಳೆಂದು ಮೂಱವಸ್ಥೆಗಳೊಳವು. ಅವಱೊಳು ಸುಷುಪ್ತಿಯೆಂಬುದು–ನಿದ್ದೆ, ಸ್ವಪ್ನಮೆಂಬುದು—ಕನಸು ; ಜಾಗರಮೆಂಬುದೆಚ್ಚಱಿಕೆ. ನಿದ್ದೆಯೊಳ್ ಜೀವಾತ್ಮಂ ಪರಮಾತ್ಮನಾದ ನಿನ್ನೊಳ್ ಪುದುಗಿ, ಜ್ಞಾನೇಂದ್ರಿಯವ್ಯಾಪಾರಮನುೞಿದಿರ್ಪುದಱಿಂ ಪೊಱಗುಮೊಳಗುಂ ತಿಳಿವಿಲ್ಲದಿರ್ಕುಂ. ಎಚ್ಚಱೊಳಂ ಕನಸಿನೊಳಂ ತಿಳಿವುಂಟಾಗಿರ್ಕುಂ. ಎಚ್ಚಱೊಳ್ ಕಾಣ್ಬ ವಸ್ತುಗಳಂ ನೀಂ ಸೃಷ್ಟಿಕ್ರಮದಿಂ ಸೃಜಿಸುದುದಱಿಂ ದೀವಸ್ತುವಿದಱಿಂ ಪುಟ್ಟುವುದು ಇದರ್ಕಿದೇಪೆಸರ್ ಈಯಾಕಾರಂ ಈ ಗುಣಂ ಇದಱಿಂದಪ್ಪ ಕಜ್ಜಮಿದು ಈ ವಸ್ತುವಿನಿತು ಕಾಲಮಿರ್ಪುದೆಂದು ಮಿತಿಯಾಗಿರ್ಕುಂ. ಇರ್ಪ ಕಾಲಮೊಳೆಲ್ಲರ್ಗಂ ತಿಳಿಯಬರ್ಕುಂ. ಕನಸಿನೊಳ್ ಕಾಣ್ಬ ವಸ್ತುಗಳಂ ನೀಂ ತತ್ಕಾಲದೊಳ್ ಸಂಕಲ್ಪಮಾತ್ರದಿಂದೆ ಸೃಜಿಸಿವುದಱಿಂದೆ ಈ ವಸ್ತುವಿದಱಿಂ ಪುಟ್ಟುವುದೆಂದುಂ ಇದರ್ಕಿದೇಯಾಕಾರಂ, ಇದೇ ಗುಣಂ ಇದೇ ಕಜ್ಜಂ—ಎಂಬಿವು ಮೊದಲಾದ ಮಿತಿಯೊಂದುಮಿಲ್ಲದೆ ವಿಚಿತ್ರಮಾಗಿ ನಿನ್ನ ಸಂಕಲ್ಪಮಿರ್ದಂತಿರ್ಕುಂ. ಆ ಕಾಲದೊಳ್ ಕನಸಂ ಕಾಣ್ಬಂಗೊರ್ವಂಗೆ ಕಾಣಿಸಿದಲ್ಲದೆ, ಮಿಕ್ಕನೊರ್ವಂಗಂ ಕಾಣಿಸದು. ಇಂತು ಜಾಗರದೊಳ್ ಕಾಣ್ಬ ವಸ್ತುವೆಲ್ಲರ್ಗಂ ಕಾಣಿಸುತ್ತುಂ ಸ್ಥಿರಮಾಗಿಯುಂ ಕನಸಿನೊಳ್ ಕಾಣ್ಬ ವಸ್ತು ಒರ್ವಂಗೆ ಕಾಣಿಸುತ್ತೆಚ್ಚಱುವುದುಂ ಪೋಪುದಱಿಂದ ನಿತ್ಯಮುಮಾಗಿರ್ಕುಂ. ಲೋಕಮರ್ಯಾದೆಯಿಂತಿರ್ದೊಡಂ ನೀನೊರ್ವರೊಳ್ ದಯೆಗೆಯ್ದು ಮಿತಿಯಂ ಪಲ್ಲಟಿಸಿ ತೋಱ

ಸುವೈ. ಅದೆನ್ತೆನೆ:—ಮುಂ ಗೋಕುಲದೊಳ್ ಬಲಭದ್ರನ ಚಾಡಿಮಾತಂ ಕೇಳ್ದು ಮಣ್ಣಂ ಮೆಲ್ಲದಿರೆಂದು ಬೆದಱಿಸುವ ಯಶೋದೆಗೆ ನಿನ್ನ ಕಿಱಿದಪ್ಪ ಚೆಮ್ಬಾಯ್ದೆಱೆದು ಪದಿನಾಲ್ಕುಂ ಲೋಕಂಗಳನಾರುಮಱಿಯದಂತೆ ತೋಱಿಸಿದ್ದೈ. ಅಂತೆರಡು ತಟ್ಟಿನ ನಟ್ಟನಡುವೆ ಆರುಮಱಿಯದಂತೆ ವಿಶ್ವರೂಪಮನರ್ಜುನಂಗೆ ತೋಱಿಸಿದ್ದೈ. ಮತ್ತಂ ಸೈಂಧವನ ಕೊಲಿಸಿಯರ್ಜುನನುೞಿಪವೇೞ್ಪುದೆಂದು ಕುರುಕ್ಷೇತ್ರದೊಳ್ ಪಗಲೊಳೆ ಇರುಳನುಂಟುಮಾಡಿದ್ದೆ. ಮತ್ತಂ ಗಂಗೆಯೊಳ್ ಮುೞುಂಗಿದ ಸುಚರಿತನೆಂಬ ಪಾರ್ವನಂ ಕಲ್ಯಾಣೀ ತೀರ್ಥಮಧ್ಯದೊಳುಣ್ಮಿಸಿದ್ದೈ. ಇಂತು ಪರೋಕ್ಷಮಲ್ಲದೆ ಸಾಕ್ಷಾತ್ಕಾರಮಾಗಿ ಎನಗೆ ಕನಸಿನೊಳ್ ನೀಂ ಕರುಣಿಸಿದ ನಂದಕಮೆಂಬ ಪೆಸರ್ವಡೆದತ್ಯುತ್ತಮಮಪ್ಪುದೊಂದು ಕತ್ತಿಯಂ ಸ್ವಾಪ್ನಪದಾರ್ಥದಂತೆ ತತ್ಕಾಲಮಾತ್ರಾನುಭಾವ್ಯಮಲ್ಲದೆ ನಿತ್ಯಮೆನಿಸಿ ಎಲ್ಲಿಱೊಳಮೆಲ್ಲರ್ಗಂ ಕಾಣಿಸುತ್ತೆ ನೀನಿತ್ತ ಮೈಮೆಯಿಂದೊಂದೆ ಗೂಡಿಯೊಳ್ ಕವಿದು ಮುತ್ತಿದ ನಾಲ್ದೆಸೆಯ ಪಗೆವರ ಪೊತ್ತಮಂ ಕತ್ತರಿಸಿ ಗೆಲ್ಲಮಂ ಕೈಕೊಂಡೆನ್ನಂ ನಿನ್ನಾಳ್ಗಕ್ಕೀಡಪ್ಪಂತೆ ನೆಗೞ್ಚಿದ್ದೈ. ನಿನ್ನ ದಿವ್ಯಾದ್ಭುತ ಗುಣಾಬ್ಧಿಯೊಳ್ ವೇದಂಗಳುಂ ಬ್ರಹ್ಮಾದಿಗಳುಮೊಂದು ತುಂತುರ್ವನಿಯನಿತುಮಂ ಈಣ್ಟಲರಿಯರ್, ಆನೆನಿತಱವಂ. ನಿನ್ನ ಮಹಿಮಾರ್ಣವಮಂ ವರ್ಣಿಪೆನೆಂದು ಪೂಣ್ದೆನ್ನ ಸಾಹಸಮಂ ಸೈರಿಸಿ, ನಿನ್ನವನೆಂದು ನಲಿಯಿಪುದು ನಲಿಯಿಪುದನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಒಂಬತ್ತನೆಯ ಬಿನ್ನಪಂ ॥

ಮಿತಿಗೆಯ್ದು ಕರ್ಮಗತಿಯಂ ।
ಜತೆಗೊಂಡೇ ಸೃಷ್ಟಿಗೆಯ್ವ ನೀಂ ಸರ್ವಸಮಂ ॥
ಸತಮೆಂದು ಶೌರಿಯೊಳ್ ಬಿ ।
ನ್ನತಿಯಂ ಲೋಕೈಕವೀರನೊರೆದುಱಿ ನೆಗೞ್ದಂ ॥ ೨೪ ॥

ಸಕಲಲೋಕ ನಿಯಾಮಕಾ! ನೀನೀಸಂಸಾರದೊಳೋರೊರ್ವಂಗೆ ಪಟ್ಟಾಭಿಷೇಕಾದಿ ಸುಖಮಂ ಓರೊರ್ವ್ವಂಗೆ ಶಿರಶ್ಛೇದನಾದಿ ದುಃಖಮನೆಸೆಗುವುದಱಿಂ ವಿಷಮನೆಂದುಂ, ಕರ್ಮಾನುಗುಣಮಾದ ಫಲಮನೀವುದಱಿಂ ಕರ್ಮಕ್ಕೆ ಪರತಂತ್ರನೆಂದುಂ, ಪಾಪಿಗಳ್ ಪಡುವ ದುಃಖಮಂ ಪರಿಹರಿಸದೆ ನೋಡುತಿರ್ಪುದಱಿಂ ನಿರ್ದಯನೆಂದುಂ ಸ್ವಲ್ಪಬುದ್ಧಿಗಳ್ಗೆ ತೋರ್ಕುಂ. ಇದಱ ನೆಲೆಯಂ ವಿಚಾರಿಸೆ, ನೀನಾಳ್ದನಾದುದಱಿಂ ನಿನ್ನಾಳ್ಗಳೆನಿಪ ಜೀವರನಿಬರೊಳಂ ಸಮಬುದ್ಧಿಯಿಂದೆಲ್ಲರುಂ ನಿನ್ನ ಮನಂ ಬರ್ಪನ್ತೆ ಊೞಿಗಮನೆಸಗಿ ಬರ್ದುಂಕವೇೞ್ಪುದೆಂದೆಣಿಸಿ ಇನ್ತಿನ್ತು ನಡೆವರ್ಗೆ ಮೋಕ್ಷಮೆನ್ದುಂ ಇನ್ತಿನ್ತು ನಡೆವರ್ಗೆ ಇಹಪರಸೌಖ್ಯಮೆನ್ದುಂ ಮಿತಿಮಾಡಿ ಆ ಮಿತಿಯೊಳಾರಾರಾವ ತೆಱದೊಳ್ ನಡೆವರ್ ಅವರವರ್ಗೆ ಆಮಿತಿಮಾಡಿದ ಫಲಮಂ ತಪ್ಪದೆ ಕುಡುವುದಱಿಂ ನೀಂ ಸರ್ವಸಮಂ, ನಿನಗೊರ್ವರೊಳಂ ವೈಷಮ್ಯಮಿಲ್ಲ. ಇನ್ತು ಅವರವರ ಕರ್ಮಾನುಗುಣಮಾಗಿ ಫಲಂಗಳನಿತ್ತುಂ ನೀಂ ಸ್ವತಂತ್ರನಲ್ಲದೆ ಪರತನ್ತ್ರನಲ್ತು. ಪಾಪಿಗಳ್ಗೆ ಪಾಪಾನುಗುಣಮಾದ ದುಃಖಮನೀಯುತುಂ ಅಜಾಮಿಳಂ ಮೊದಲಾದ ಓರೊರ್ವರೊಳ್ ಮಿತಿಮೀಱಿ ದಯೆಗೆಯ್ದುದಱಿಂ ಪರಮದಯಾಳುವೆನಿಸುವೈ. ಅದೆನ್ತೆನೆ:—ಲೋಕದೊಳ್ ಧಾರ್ಮಿಕನಾಗಿರ್ಪನರಸನೊರ್ವಂ ತನ್ನ ನಾಡೊಳಿನ್ತು ನಡೆವರಂ ಮನ್ನಿಪೆಂ ಇನ್ತು ನಡೆವರಂ ದಂಡಿಪೆನೆಂದು ಮುನ್ನಮೇ ಮಿತಿಮಾಡಿ, ಆ ಮಿತಿಯಿರ್ದಂತೆ ಇವರವರೆನ್ನದೆ ನಿಗ್ರಹಾನುಗ್ರಹಂಗಳಂ ನಡೆಯಿಸಿದೊಡೆ ಪಕ್ಷಪಾತಮಿಲ್ಲದೆ ಸರ್ವಸಮನೆಂಬರ್; ತಾಂ ಮಿತಿಮಾಡಿದ ಮಿತಿಯಂ ಬಿಡದೆ ತಾಂ ನಡೆಯಿಸುವುದಱಿಂ ತಾಂ ಸ್ವತ

ನ್ರ್ರನೆಂಬರ್ ; ತಪ್ಪಿದರಂ ದಣ್ಡಿಸುವೆಡೆಯೊಳೆತ್ತಾನುಮೊರ್ವನೊಳ್ ತಪ್ಪಿ ರ್ದುಂ ಮನ್ನಿಸಿಮೊಡಂ ದಯಾಳುವೆಂಬರ್. ಅಂತು ನೀಂ ನಿನ್ನಾಜ್ಞಾ ರೂಪವಾದ ಕರ್ಮಕ್ಕನುಗುಣವಾಗಿ ಫಲಮನೀವುದಱಿಂ ಸರ್ವಜ್ಞನುಂ, ಆ ಮಿತಿ ತಪ್ಪದನ್ತೆ ನಡೆಯಿಸುವುದಱಿಂ ಸ್ವತನ್ತ್ರನುಂ, ಓರೊರ್ವರ ತಪ್ಪಂ ಮನ್ನಿಪುವಱಿಂ ದಯಾಳುವೆನ್ದುಂ ಪಿರಿಯರಿಂ ಕೇಳ್ದು, ನಿನ್ನಂ ನೆರೆ ನಮ್ಬಿ ದೆನೆನ್ನ ತಪ್ಪನೊಪ್ಪುಗೆಯ್ದು ಕರುಣಿಪುದು ಕರುಣಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಪತ್ತನೆಯ ಬಿನ್ನಪಂ. ॥

ಪರಿಪರಿಯ ಜಗಕೆ ಮೂಱುಂ ।
ಪರಿಯೆನಿಸುವ ಕಾರಣಂಗಳುಂ ನೀನೆಂದಾ ॥
ಬಿರುದಂತೆಂಬರಗಣ್ಡಂ ।
ಮುರವೈರಿಯ ಪದಕೆ ಮುದವೆ ಬಿನ್ನತಿಗೆಯ್ದಂ ॥ ೨೫ ॥

ಸಕಲಜಗದೇಕಕಾರಣಾ ! ಕಾರ್ಯಮನುಣ್ಟುಮಾಡುವ ವಸ್ತು ಕಾರಣಮೆನಿಪ್ಪುದು. ಅದು ಉಪಾದಾನಕಾರಣಮೆಂದುಂ ನಿಮಿತ್ತಕಾರಣ ಮೆಂದುಂ ಸಹಕಾರಿಕಾರಣಮೆಂದುಂ ಮೂಱುಂ ತೆಱನಾಗಿರ್ಕುಂ. ಪೊಸ ತೊಂದು ಕಾರಣಮಂ ಪಡೆದು ತಾನೇ ಕಾರ್ಯಮೆನಿಪ ವಸ್ತು ಉಪಾದಾನ ಕಾರಣಂ ; ಈ ಉಪಾದಾನಕಾರಣದಿಂ ಕಾರ್ಯಮನುಣ್ಟುಮಾಡುವ ತೆಱನ ಱಿತು ಉಣ್ಟುಮಾಡುವ ಕರ್ತೃ ನಿಮಿತ್ತಕಾರಣಂ ; ಈ ಕರ್ತೃ ಕಾರ್ಯಮ ನಂಟುಮಾಡುವುದರ್ಕೆ ಬೇಕ್ಕ ಉಪಕರಣಂಗಳ್ ಸಹಕಾರಿಕಾರಣಂ. ಇವು ಆವಾವುವೆನೆ ?—ಸ್ವರ್ಣಮಯಮಾದ ಕಟಕಮಕುಟಾದಿಕಾರ್ಯಕ್ಕೆ ಸ್ವರ್ಣಮುಪಾದಾನಕಾರಣಂ, ಸ್ವರ್ಣಕಾರಂ ನಿಮಿತ್ತಕಾರಣಂ, ಸುತ್ತಿಗೆ ಅಡಿ ಗಲ್ಲಿರ್ಕುಳ ಜೆಂಕಿ ನೀರ್ ಮೊದಲಾದುವು ಸಹಕಾರಿಕಾರಣಂ. ಮತ್ತಂ ಮೃಣ್ಮಯಮಾದ ಘಟಶರಾವಾದಿಗಳ್ಗೆ ಮೃತ್ಪಿಣ್ಡಮುಪಾದಾನಕಾರಣಂ, ಕುಲಾಲಂ ನಿಮಿತ್ತ ಕಾರಣಂ, ಚಕ್ರಂ ಮೊದಲಾದುವು ಸಹಕಾರಿಕಾರಣಂ. ಇಂತು ಲೋಕದೊಳ್ ಪುಟ್ಟುವ ಕಾರ್ಯಮನಿತರ್ಕ್ಕಂ ಮೂಱುಂ ತೆಱನಾದ ಕಾರಣಂಗಳುಂ ಬೇಱೆಬೇಱಾಗಿರ್ಪುವು. ಈ ಲೋಕಮರ್ಯಾದೆಯಂ ಮೀಱಿ ಜಗಮೆಂಬ ಕಾರ್ಯಕ್ಕೆ ನೀನೊರ್ವನೆ ಮೂಱುಂ ತೆಱನಾದ ಕಾರಣ ಮಾಗಿರ್ಪೆ. ಅದೆಂತೆನೆ ?—ಮಹಾಪ್ರಳಯದೊಳ್ ಪಞ್ಚ ಮಹಾಭೂ ತಂಗಳುಂ ಪಞ್ಚತನ್ಮಾತ್ರೆಗಳುಂ ಏಕಾದಶೇನ್ದ್ರಿಯಂಗಳುಂ ಅಹಂಕಾರ ತತ್ವಮುಂ ಮಹತ್ತತ್ವಮುಂ ಕೂಡಿ ಇರ್ಪತ್ತು ಮೂಱುಂ ತತ್ವಂಗಳುಂ ಪ್ರಕೃತಿಯೊಳಡಂಗಿ, ಉೞಿದ ಪ್ರಕೃತಿಯುಂ ಜೀವನುಮೆಂಬ ಎರಡುಂ ತತ್ವಂಗಳುಂ ಪೆಸರುಮಾಕಾರಮುಂ ಬೇಱೆನಿಸಿ ತಿಳಿಯದನ್ತೆ ನಿನ್ನೊಳ್

ವುದುಗಿ ನಿನ್ನ ಶರೀರ ಮಾಗಿರ್ಪುದಱಿಂ, ನೀನೊರ್ವನೇ ಉೞಿದಿರ್ಪೆ. ಆ ವೇಳೆಯೊಳ್ ನೀನೇ ಮೂಱಿಂ ತೆಱದ ಕಾರಣಮಾಗಿ ಜಗಮನುಂಟು ಮಾಳ್ಪುದಱಿಂ ಜಗವೇಕ ಕಾರಣಮೆಂಬುದು ಸಿದ್ಧಂ. ಇಂತು ಸೂಕ್ಷ್ಮಪ್ರಕೃತಿಜೀವಶರೀರಕನಾದ ನೀನುಪಾದಾನಕಾರಣಮಾದೊಡಂ ಪೊಸತೊಂದು ಆಕಾರಮಂ ಪಡೆವುದೆಂಬ ಪರಿಣಾಮದೋಷಂ ಪ್ರಕೃತಿಮಾತ್ರಕ್ಕಲ್ಲದೆ ನಿನ್ನ ದಿವ್ಯಾತ್ಮಸ್ವರೂಪಕ್ಕಿಲ್ಲೆನ್ದು ಸಕಲವೇದಾನ್ತಂಗಳುಂ ನಿನ್ನ ಮೈಮೆಯಂ ಪೊಗೞ್ದು ಅಚ್ಚರಿವಡುವುವು. ಈ ಜಗದುತ್ಪತ್ತಿ ಸ್ಥಿತ್ಯಾದಿಗಳಪ್ಪ ನಿನ್ನ ದಿವ್ಯಾದ್ಭುತ ಲೀಲೆಗಳಂ ನಿರವಿಸಲಾನೆನಿತಱವಂ. ನಿನ್ನವರೆನಿಪ ಪಿರಿಯರ್ ಪಲರ್ಮೆಯಿಂ ಕಲಿಸೆ ಒನ್ದೊನ್ದು ನುಡಿಯಂ ಕಲ್ತೋದುವಗಿಳಿವಱಿಯನ್ತೆನ್ನ ನುಡಿಗೆ ಚಿತ್ತದೊಳ್ ಸಂತಸಂಬಡೆವುದು ಸನ್ತಸಂಬಡೆವುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಪನ್ನೊಂದನೆಯ ಬಿನ್ನಪಂ ॥

ಊಹಿಸೆ ಜೀವನ ಚೇತನ ।
ದೇಹಾದಿಗಳತ್ತಣಿಂದಮನ್ಯಂ ದಿಟಮೆಂ ॥
ದೀಹದನಂ ಶೌರಿಗೆ ತಾ ।
ನಾಹವಮಲ್ಲಾಂಕನೊಲ್ದು ಬಿನ್ನತಿಗೆಯ್ದಂ ॥ ೨೬ ॥

ಪರಮಾತ್ಮಾ ! ನೀಂ ಸಕಲ ಜೀವಾತ್ಮವರ್ಗಕ್ಕಂ, ಪಿರಿಯನಪ್ಪ ದಱಿಂ ನಿನ್ನಂ ಪರಮಾತ್ಮನೆಂಬುದು. ಜೀವಾತ್ಮಸ್ವರೂಪಮಂ ವಿಚಾರಿ ಪೆಡೆಯೊಳ್ ಶರೀರಮೇ ಜೀವಾತ್ಮನೆನ್ದಂ, ಬಾಹ್ಯೇನ್ದ್ರಿಯಂಗಳೇ ಜೀ ವಾತ್ಮನೆನ್ದಂ, ಸಕಲಶರೀರದೊಳಮಿರ್ಪ ಜೀವಾತ್ಮನೊರ್ವನೆ ಎನ್ದಂ ಸ್ವತನ್ತ್ರನೆನ್ದಂ ಪೇಳ್ವರ್. ಈ ಪಕ್ಷಂಗಳನಿತುಂ ಯುಕ್ತಿವಿರುದ್ಧಂಗ ಳಾಗಿಯುಂ ಶಾಸ್ತ್ರವಿರುದ್ಧಂಗಳುಮಾಗಿರ್ಪುವು. ಅದೆನ್ತೆನೆ:—ಶರೀರ ಮೇ ಜೀವಾತ್ಮನಾದೊಡೆ ಮೃತಶರೀರಮುಚ್ಚಟಿಯುದಿರ್ದುಂ ಜೀವಂ ಪೋದುದೆಂಬ ನಾಣ್ನುಡಿ ಕೂಡದು. ಚಕ್ಷುರಾದೀನ್ದ್ರಿಯಂಗಳೇ ಜೀವಾ ತ್ಮನಾದೊಡೆ, ಅನ್ಧಬಧಿರಾದಿಗಳೊಳ್ ಜೀವಾತ್ಮನಿಲ್ಲೆನವೇಳ್ಪುದು. ಮ ನಸ್ಸುಂ ಪ್ರಾಣವಾಯುವುಂ ಜಡಮಪ್ಪುದಱಿಂ ಜೀವಾತ್ಮನಲ್ತು. ಜ್ಞಾನ ಮೇ ಜೀವಾತ್ಮನಾದೊಡೆ ತಾಂ ಜ್ಞಾನಮುಳ್ಳವನೆನಕೂಡದು, ಮೇಣ್ ತಾಂ ಜ್ಞಾನಮೆನವೇಳ್ಪುದು ; ಅದಱಿಂ ಜೀವಾತ್ಮಂ ಶರೀರಬಾಹ್ಯೇನ್ದ್ರಿ ಯಮನಃಪ್ರಾಣಜ್ಞಾನಂಗಳತ್ತಣಿಂ ಬೇಱಾಗಿ ಸ್ವಪ್ರಕಾಶಮಾಗಿರ್ಕುಂ. ಸಕಲಶರೀರಂಗಳೊಳಂ ಜೀವಾತ್ಮನೊರ್ವನೆ ಆದೊಡೆ, ಒರ್ವನ ಶ್ರೇಯಸ್ಸಿಂ ಗೊರ್ವಂ ಕಱುಬುವುದು ಒರ್ವಂಗೊರ್ವನೆ ಪಗೆಯಪ್ಪುದುಂ, ಒರ್ವನೊರ್ವಂ ಕೊಲ್ವುದುಂ ಕೂಡದು ; ಎಲ್ಲರನ್ತರಂಗಮನೆಲ್ಲರುಂ ತಿಳಿಯವೇಳ್ಪುದು ; ಮೇ ಮತ್ತಮೊರ್ವಂಗೆ ವೇದಾಂತಜ್ಞಾನಂ ಪುಟ್ಟಿದಮಾತ್ರದೊಳೆಲ್ಲರ್ಗಂ ಮುಕ್ತಿ ಯಪ್ಪುದಱಿಂ ಪಲರುಂ ವೇದಾನ್ತಶ್ರವಣಂಗೆಯ್ವುದು ವ್ಯರ್ಥಮಕ್ಕುಂ. ಜೀವಾತ್ಮಂ ಸ್ವತನ್ತ್ರನಾದೊಡೆ ದುಃಖಮಯಮಾದ ಸಂಸಾರಮನಂಗೀಕ ರಿಸಂ. ಈ ಯುಕ್ತಿಗಳೊಡಗೂಡಿದ ಶಾಸ್ತ್ರವಚನಂಗಳಿಂ ಜೀವಾತ್ಮರ್

ಪಲರಾಗಿ ನಿನ್ನಾಳ್ಗಳಾಗಿರ್ಪರ್. ಈ ಜೀವಾತ್ಮರೆಲ್ಲರ್ಗಂ ಒಡೆಯನಾಗಿ ಪರಮಾತ್ಮನೆನಿಸುವೈ. ಇಂತು ನೀನೊಡೆಯನುಮಾನೊಡಮೆಯುಮೆನಿಪ ಸ್ವಸ್ವಾಮಿಸಮ್ಬನ್ಧಮಂ ಇನ್ನೆವರಮಱಿಯದೆ ಪುರುಳಱಿದಿರ್ಪೆನಗೆ ನೆವಮಿಲ್ಲದ ದಯೆಯಿಂದೀಗಳಱಿಪಿ ಸ್ವರೂಪಮನುಣ್ಮುಮಾಡಿದ ಮೇಲಿನ್ನುಂ ಶ್ರೇಯಃಪರಂಪರೆಗಳಂ ಪೆಂಪುಗೆಯ್ವುದು ಪೆಂಪುಗೆಯ್ವುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



|| ಪನ್ನೆರಡನೆಯ ಬಿನ್ನಪಂ. ||

ನಿನ್ನಿಚ್ಛಾಮಾತ್ರದೊಳೇ |
ಮುನ್ನಿಗಲ್ದುದು ತತ್ವಸೃಷ್ಟಿಯೆನ್ದು ಯದುಕ್ಷ್ಮಾ ||
ಭೃನ್ನಿಧಿಯ ಪಾದಪಂಕಜ |
ಸನ್ನಿಧಿಯೊಳ್ ಬೊಗ್ಗಿಜಗದಲ್ಲಣಂ ನಿರವಿಸಿದಂ || ೧೨ ||

ಪರತತ್ವಸ್ವರೂಪಾ ! ನಿನ್ನಧೀನವಾಗಿ ನಿನ್ನ ಶರೀರಮೆನಿಸಿರ್ಪ ತತ್ವಂಗಳ್ ಜೀವನೆನ್ದುಂ ಪ್ರಕೃತಿಯೆನ್ದುಂ ಎರಡಾಗಿರ್ಕುಂ. ಅವಱೊಳ್ ಜೀವತತ್ವಂ ನಿನ್ನೊಡಮೆಯಾಗಿ ಜ್ಞಾನಾನನ್ದಸ್ವರೂಪವಾಗಿ ನಿತ್ಯವಾಗಿರ್ಕುಂ. ಪ್ರಕೃತಿಯೆಂಬುದು ತಾನೊಂದು ತನ್ನಿಂದಂ ಪುಟ್ಟಿದ ತತ್ವಙ್ಗಳಿರ್ಪತ್ತಮೂಱುಂ ಕೂಡಿ ಇರ್ಪತ್ತನಾಲ್ಕುಂ ತತ್ವವಾಗಿರ್ಕುಂ. ಅದೆನ್ತೆನೆ?—ಮಹಾಪ್ರಳಯದೊಳ್ ಪ್ರಕೃತಿ ನಿನ್ನೊಳ್ ಪುದುಗಿರ್ಪುದು. ಅದಱೊಳ್ ಸತ್ವರಜಸ್ತಮಸ್ಸುಗಳೆಂಬ ಮೂಱುಂ ಗುಣಂಗಳ್ ಪೆರ್ಚುಗೆಯಿಲ್ಲದೆ ಇರ್ಪುವು. ಆ ಪ್ರಕೃತಿಗೆ ಮಾಯೆಯೆನ್ದುಂ ಅವಿದ್ಯೆಯೆನ್ದುಂ ಪ್ರಧಾನಮೆನ್ದುಂ ಪೆಸರಾಗಿರ್ಕುಂ. ಈಪ್ರಕೃತಿ ಕೀೞ್ಗಡೆಯೊಳಂ ಎಣ್ದೆಸೆಯೊಳಂ ಮಿತಿಯಿಲ್ಲದೆ ವ್ಯಾಪಿಸಿ ಮೇಗಣ್ಗೆ ವೈಕುಣ್ಠಲೋಕಪರ್ಯನ್ತಮಾಗಿರ್ಕುಂ. ಇಂತು ಪೂರ್ಣಮಾಗಿರ್ಪ ಪ್ರಕೃತಿಯು ಕೆಲವೆಡೆಯೊಳ್ ಸತ್ವರಜಸ್ತಮೋ ಗುಣಂಗಳ್ ಪೆರ್ಚುಗೆವಡೆದ ಮಹತ್ತತ್ವಂ ಪುಟ್ಟುಗುಂ. ಇಂತೊಂದೇ ಸರಿಯೊಳ್ ಪೆರ್ಚುಗೆವಡೆದ ಮೂರುಂ ಗುಣಮುಳ್ಳ ಮಹತ್ತತ್ವದ ಒಂದೊಂದೆಡೆಯೊಳೊಂದೊಂದು ಗುಣಂಗಳ್ ಮಿಕ್ಕೆರಡು ಗುಣಂಗಳಂ ಮೆಟ್ಟಿ ಮಿಗೆಯುಂ ಪೆರ್ಚುಗೆವಡೆಗುಂ. ಅಲ್ಲಿ ಸತ್ವಂ ಪೆರ್ಚಿದೆಡೆಯೊಳ್ ಸಾತ್ವಿಕಮೆನ್ದುಂ, ರಜಸ್ಸು ಪೆರ್ಚಿದೆಡೆಯೊಳ್ ರಾಜಸಮೆನ್ದುಂ, ತಮಸ್ಸು ಪೆರ್ಚಿದೆಡೆಯೊಳ್ ತಾಮಸಮೆನ್ದುಂ ಮೂಱುಂ ತೆಱದ ಅಹಂಕಾರತತ್ವಂ ಪುಟ್ಟುಗುಂ. ಇದಱೊಳ್ ಸಾತ್ವಿಕಾಹಂಕಾರದಿಂ ಶಬ್ದಮಂ ತಿಳಿವ ಶ್ರೋತ್ರಮುಂ, ಸ್ಪರ್ಶಮಂ ತಿಳಿವ ತ್ವಕ್ಕುಂ, ರೂಪಮಂ ತಿಳಿವ ಚಕ್ಷುಸ್ಸುಂ, ರಸಮಂ ತಿಳಿವ ರಸನೆಯುಂ, ಗನ್ಧಮಂ ತಿಳಿವ ಘ್ರಾಣಮುಮೆಂಬ—ಜ್ಞಾನೇಂದ್ರಿಯಂಗಳೈದುಂ, ಮತ್ತಂ ನುಡಿವ ವಾಕ್ಕುಂ, ಕುಡಿವ

ಪಾಣಿಯುಂ, ನಡೆವ ಪಾದಮುಂ, ಶರೀರ ಧರ್ಮಂಗಳನೆಸಗುವ ಪಾಯು ಗುಹ್ಯೇನ್ದ್ರಿಯಂಗಳೆಂಬ ಕರ್ಮೇನ್ದ್ರಿಯಂಗಳೈದುಂ, ಮತ್ತಂ ಜ್ಞಾನೇನ್ದ್ರಿಯ ಕರ್ಮೇನ್ದ್ರಿಯಮೆರಡರ್ಕಂ ಸಹಾಯಮಾದ ಮನಸ್ಸೆಂಬ ಅಂತರಿನ್ದ್ರಿಯಮೊಂದುಂ ಕೂಡಿ ಪನ್ನೊಂದಿನ್ದ್ರಿಯಂಗಳ್ ಪುಟ್ಟುಗುಂ. ತಾಮಸಾಹಂಕಾರದಿಂದೆ ಅವ್ಯಕ್ತಮಾದ ಶಬ್ದಗುಣಮುಳ್ಳ ಶಬ್ದತನ್ಮಾತ್ರಂ ಪುಟ್ಟುಗುಂ. ಈ ಶಬ್ದತನ್ಮಾತ್ರದಿಂದೆ ಅವ್ಯಕ್ತಮಾದ ಶಬ್ದಗುಣಮುಳ್ಳಾಕಾಶಂ ಪುಟ್ಟುಗುಂ. ಈಯಾಕಾಶಮೊಡಗೂಡಿದ ಶಬ್ದತನ್ಮಾತ್ರದಿಂದ ವ್ಯಕ್ತಮಾದ ಸ್ಪರ್ಶಗುಣಮುಳ್ಳ ಸ್ಪರ್ಶತನ್ಮಾತ್ರಂ ಪುಟ್ಟುಗುಂ. ಈಸ್ಪರಶತನ್ಮಾತ್ರದಿಂದೆ ಅವ್ಯಕ್ತಮಾದ ಸ್ಪರ್ಶಗುಣಮುಳ್ಳ ವಾಯು ಪುಟ್ಟುಗುಂ. ಈವಾಯುವೊಡಗೂಡಿದ ಸ್ಪರ್ಶತನ್ಮಾತ್ರದಿಂದೆ ಅವ್ಯಕ್ತಮಾದ ರೂಪಗುಣಮುಳ್ಳ ರೂಪತನ್ಮಾತ್ರಂ ಪುಟ್ಟುಗುಂ. ಈ ರೂಪತನ್ಮಾತ್ರದಿಂದೆ ಅವ್ಯಕ್ತಮಾದ ರೂಪಗುಣಮುಳ್ಳ ತೇಜಸ್ಸು ಪುಟ್ಟುಗುಂ. ಈ ತೇಜಸ್ಸಿನೊಡಗೂಡಿದ ರೂಪತನ್ಮಾತ್ರದಿಂದೆ ಅವ್ಯಕ್ತಮಾದ ರಸಗುಣಮುಳ್ಳ ರಸತನ್ಮಾತ್ರಂ ಪುಟ್ಟುಗುಂ. ಈ ರಸತನ್ಮಾತ್ರದಿಂದೆ ಅವ್ಯಕ್ತಮಾದ ರಸಗುಣಮುಳ್ಳ ಜಲಂ ಪುಟ್ಟುಗುಂ. ಈ ಜಲದೊಡಗೂಡಿದ ರಸತನ್ಮಾತ್ರದಿಂದೆ ಅವ್ಯಕ್ತಮಾದ ಗನ್ಧಗುಣಮುಳ್ಳ ಗನ್ಧತನ್ಮಾತ್ರಂ ಪುಟ್ಟುಗುಂ. ಈ ಗನ್ಧತನ್ಮಾತ್ರದಿಂದೆ ಅವ್ಯಕ್ತಮಾದ ಗಂಧಗುಣಮುಳ್ಳ ಪೃಥಿವಿ ಪುಟ್ಟುಗುಂ. ರಾಜಸಾಹಂಕಾರಮೆಂಬುದು ಸಾತ್ವಿಕಾಹಂಕಾರದಿಂದೇಕಾದಶೇನ್ದ್ರಿಯಂಗಳ್ ಪುಟ್ಟುವುದರ್ಕಂ, ತಾಮಸಾಹಂಕಾರದಿಂ ಪಞ್ಚತನ್ಮಾತ್ರಂಗಳಂ ಪಞ್ಚಭೂತಂಗಳುಂ ಪುಟ್ಟುವುದರ್ಕಂ ಸಹಾಯಮಾಗಿರ್ಪುದು. ಇಂತು ಪ್ರಕೃತಿಮಹತ್ತುಂ ಅಹಂಕಾರಂಗಳುಂ ಏಕಾದಶೇನ್ದ್ರಿಯಂಗಳುಂ ಪಂಚತನ್ಮಾತ್ರಂಗಳುಂ ಪಞ್ಚಭೂತಂಗಳುಂ ಎಂದಿರ್ಪತ್ತುನಾಲ್ಕುಂ ತೆಱನಾದ ಅಚೇತನ ಪ್ರಕೃತಿತತ್ವಕ್ಕಂ ಚೇತನಮಾದ ಜೀವತತ್ವಕ್ಕಂ ಪಿರಿಯನಪ್ಪುದಱಿಂ ನೀನೇ ಪರತತ್ವಮೆಂದು ಪಿರಿಯರಿಂ ಕೇಳ್ದು ನಿನ್ನನೆ ನೆರೆನಮ್ಬಿದೆನ್ನಂ ದಯಾಮೃತದೊಳ್ ನನೆದು ತಣ್ಪುವೆತ್ತ ನಿನ್ನ ಕಡೆಗಣ್ಬೆಳಗನೆನ್ನೊಳ್ ಸುಱಿಸಿ ಎನ್ನರಜಸ್ತಮೋಗುಣಂಗಳೆಂಬ ಕಳೆಯಂ ಕಳೆದು ಸತ್ವಗುಣಮಂ ಪೆರ್ಚಿಪುದು ಪೆರ್ಚಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !

## ॥ ಪದಿಮೂಱನೆಯ ಬಿನ್ನಪಂ ॥

ಪಲವುಮಜಾಣ್ಡಂಗಳ ನೀಂ ।
ಜಲಬುದ್ಬುದದನ್ತೆ ಪೊಣ್ಮೆಪ್ಪೆಯೆಂದೊಱೆದಂ ॥
ಜಲರುಹನಾಭನ ಮೆಲ್ಲಡಿ ।
ಗೊಲವಿಂ ಸಂಗ್ರಾಮರಾಮನೊಳ್ ಬಿನ್ನಪವಂ ॥ ॥ ೨೮ ॥

ಅನೇಕ ಕೋಟಿಬ್ರಹ್ಮಾಣ್ಡನಾಯಕಾ ! ನೀಂ ಜೀವರೊಳ್ ಪಯೊಗೆಯ್ದು ಅವರ್ಗೆ ಕರಣಕಳೇಬರಾದಿಗಳಂ ಕುಡಲೆಳಸಿ, ಅಶರೀರದಿಂದವರ್ ಕರ್ಮಂಗಳನೆಸಗಲುಂ ಆಕರ್ಮಫಲಂಗಳನನುಭವಿಸಲುಂ ತಾಣಮಾದ ಬ್ರಹ್ಮಾಣ್ಡಮಂಸಮೆದ್ದೆ. ಅದೆನ್ತೆನೆ?—ಮುಂ ನೀಂ ಸೃಜಿಸಿದ ಪಞ್ಚ ಮಹಾಭೂತಂಗಳುಮೊಂದಱೊಳೊನ್ದಂ ಬೆರಸದೆ ಬೇಱೆವೇಱಾಗಿರ್ಪುದಱಿಂದೊಂದು ಕಾರ್ಯಕ್ಕಂ ಬಾರದಿರ್ಪುದಂ ಕಂಡು, ಅವೆಲ್ಲಮಂ ಪಂಚೀಕರಣಪ್ರಕಾರದಿಂದೊಂದುಗೂಡಿಸಿದ್ದೆ. ಪಂಚೀಕರಣಮೆನೆ:—ಪಞ್ಚ ಮಹಾಭೂತಂಗಳೊಳೊಂದು ಮಹಾಭೂತದಂಶದರ್ಧಮಂ ಮಿಕ್ಕ ನಾಲ್ಕುಂ ಮಹಾಭೂತಂಗಳ ನಾಲ್ಕಂಶಂಗಳುಮರ್ಧಮಾಗಿ ಕೂಡಿಸೆ ಒಂದು ವಸ್ತುವೆನಿಪುದು. ಅದಱೊಳಾಕಾಶಮರ್ಧಮುಂ ವಾಯುತೇಜೋಜಲಪೃಥ್ವಿಗಳಷ್ಟಮಾಂಶಂಗಳುಮರ್ಧಮಾಗಿ ಈ ಎರಡರ್ಧಂಗಳನೊಂದುಗೂಡಿಸೆ, ಇದು ಪಂಚೀಕೃತಾಕಾಶಮೆನಿಕ್ಕುಂ. ಮತ್ತಂ ವಾಯ್ವಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ, ಪಂಚೀಕೃತವಾಯುವೆನಿಕ್ಕುಂ. ಮತ್ತಂ ತೇಜೋಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ, ತೇಜಸ್ಸೆನಿಕ್ಕುಂ. ಮತ್ತಂ ಜಲಾಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಜಲಮೆನಿಕ್ಕುಂ. ಮತ್ತಂ ಪೃಥ್ವ್ಯಂಶಮರ್ಧಮುಂ ಮಿಕ್ಕ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಪೃಥಿವಿಯೆನಿಕ್ಕುಂ. ಇಂತು ಪಂಚೀಕೃತ ಮಹಾಭೂತಂಗಳೊಂದಱೊಳ್ ಮಿಕ್ಕ ನಾಲ್ಕುಂ ಭೂತಂಗಳ್ ಬೆರೆದಿರ್ದೊಡಂ ಒಂದು ಭೂತದಂಶದರ್ಧಮುಂ

ಮಿಕ್ಕ ಭೂತಂಗಳಷ್ಟವಾಂಶಮುಮಾಗಿ ಪೆರ್ಚುಗೆಯಾಗಿ ಐದು ರಾಶಿಗಳಿ ರ್ಪುದವಱಿಂದಾವ ರಾಶಿಯೊಳಾವ ಭೂತಾಂಶಮಧಿಕಮಾಗಿರ್ಕುಂ. ಆರಾ ಶಿಗಾಭೂತದ ಪೆಸರಕ್ಕುಂ. ಇಂತಿರ್ಪ ಪಂಚಮಹಾಭೂತಂಗಳುಂ ಮಹ ದಹಂಕಾರತತ್ವಂಗಳುಂ ಕೂಡಿ ಏೞುಂ ವಸ್ತುಗಳಿಂ ಬ್ರಹ್ಮಾಣ್ಡಮನುಣ್ಟು ಮಾಳ್ಪಲ್ಲಿ, ಮಡಕೆಗೆಯ್ವ ಕುಲಾಲಾದಿಗಳಂತೆ ಶರೀರಾಯಾಸಮಿಲ್ಲದೆ ನೀರೋಳ್ ಬೊಬ್ಬುಳಿಯಿಂ ಪ್ರೋಣ್ಗೆಸುವನ್ತೆ ನಿಚ್ಛಾಮಾತ್ರದಿಂ ಪ್ರೋಣ್ಗೆ ಸಿದ್ದೈ. ಆಬೞಿಕೆ ಬ್ರಹ್ಮಾಣ್ಡದೊಳ್ ಪುಟ್ಟಿಪ ದೇವಮನುಷ್ಯತಿರ್ಯಕ್ಸ್ಥಾವ ರಸೃಷ್ಟಿಗಳನಾಳಿಟ್ಟು ಗೆಯ್ಯುವೆನೆಂದು ನಾಲ್ಮೊಗನಂ ಪಡೆದೈ. ಇಂತು ನೀನೆ ಗೆಯ್ವ ತತ್ವಸೃಷ್ಟಿಯುಂ, ಅಣ್ಡಸೃಷ್ಟಿಯುಂ, ಬ್ರಹ್ಮಸೃಷ್ಟಿಯುಂ ಸಮಷ್ಟಿಸೃಷ್ಟಿಯೆನಿಕ್ಕುಂ. ಬೞಿಕೆ ಚತುರ್ಮುಖನಿಂ ಗೆಯ್ಯುವ ದೇವಾ ದಿಸೃಷ್ಟಿ ವ್ಯಷ್ಟಿಸೃಷ್ಟಿಯೆನಿಕ್ಕುಂ. ಈ ಪೇೞ್ದ ಬ್ರಹ್ಮಾಣ್ಡದನ್ತೆ ಪಲವುಂ ಬ್ರಹ್ಮಾಣ್ಡಂಗಳಂ ನೀನೊರ್ವನೇ ಸೃಜಿಸಿ ಆಳಿಟ್ಟು ಕಜ್ಜಂಗೊಂಬುದ ಱಿಂದೆ ಅನೇಕ ಕೋಟಿ ಬ್ರಹ್ಮಾಣ್ಡನಾಯಕನೆನಿಸುವೈ. ಈ ಜಗದ್ವ್ಯಾಪಾರವ್ಯಾಸಂಗದೊಳೆನ್ನಂ ಮಱೆಯದೆ ನಿನ್ನ ದಯಾದ್ರ್ರಚಿತ್ತದಿಂ ನೆನೆ ವುದು ನೆನೆವುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!



## ॥ ಪದಿನಾಲ್ಕನೆಯ ಬಿನ್ನಪಂ ॥

ಅನಿತುಂ ಕರ್ಮಫಲಂಗಳ ।
ನನುಭವಿಸುವ ತಾಣಮಾದ ಭುವನಂಗಳ ನೀ ॥
ನನುಗೊಳಿಸಿದಪ್ಪೆಯೆಂದಾ !
ದನುಜಾರಿಗೆ ಪೇಳ್ದನೊಲ್ದು ಗಣ್ಡರಗಣ್ಡಂ ॥ ॥ ೨೯ ॥

ಸಕಲಭುವನಾಧಾರಾ ! ಭುವನಂಗಳ್ ಪದಿನಾಲ್ಕು, ಅವೆಲ್ಲಮುಂ ಬ್ರಹ್ಮಾಣ್ಡದೊಳಿರ್ಕುಂ. ಅದೆನ್ತೆನೆ:—ಬ್ರಹ್ಮಾಣ್ಡವೆಂಬುದು ಭರಣಿಯನ್ತೆ ಬಟ್ಟಿತ್ತಾಗಿರ್ಕುಂ. ಅದಱೊಳಗಣಿಮ್ಬು ಆವ ದಿಕ್ಕಿನೊಳಮಯ್ವತ್ತುಕೋಟಿ ಯೋಜನದಳತೆಯಾಗಿರ್ಕುಂ. ಅದಱೊಳ್ ಕೆಳಗಣಂದಣ್ಡಭಿತ್ತಿವಿಡಿದು ಮೇಗಣ್ಗೆ ಗರ್ಭೋದಕಮಿರ್ಪ ತಾವು ಎಪ್ಪತ್ತಮೂಱು ಲಕ್ಷದಯ್ವತ್ತು ಸಾವಿರ ಯೋಜನಮಾಗಿರ್ಕುಂ. ಅದರ್ಕೆ ಮೇಲೆ ಬಯಲಾಗಿರ್ಪ ತಾವು ಇರ್ಪತ್ತ ನಾಲ್ಕು ಕೋಟಿಯುಂ ಪದಿನಾಲ್ಕು ಲಕ್ಷಮುಂ ನಾಲ್ವತ್ತೆಂಟು ಸಾವಿರಯೋಜನಮಾಗಿರ್ಕುಂ. ಅಲ್ಲಿ ತೆಂಕಣ ಭಾಗದಲ್ಲಿ ರೌರವಾದಿ ನರಕಂಗಳಾಗಿರ್ಕುಂ. ಅದರ್ಕೆ ಮೇಲೆ ಶೇಷಲೋಕವೆಂಬುದು ಮೂವತ್ತೆರಡು ಸಾವಿರ ಯೋಜನಮಾಗಿರ್ಕುಂ. ಅದರ್ಕೆ ಮೇಲೆ ಭೂಮಿ ಎಪ್ಪತ್ತುಸಾವಿರ ಯೋಜನದೊಳಗೆ ಒಂದೊಂದು ಹತ್ತುಸಾವಿರ ಯೋಜನಮಾಗಿ ಮೇಲ್ಮನೆಯ ಮರ್‍ಯಾದೆಯಲ್ಲಿ ಪಾತಾಳಾದಿಯಾಗಿ ಸಪ್ತಲೋಕಂಗಳಾಗಿರ್ಪುವು. ಭೂಮಿಗೆ ಮೇಲೆ ಸೂರ್ಯಮಂಡಲಪರ್ಯನ್ತಮೊಂದು ಲಕ್ಷ ಯೋಜನಮಾಗಿರ್ಕುಂ. ಅಂತು ಕೆಳಗಣಂಡದ ಭಿತ್ತಿವಿಡಿದು ಸೂರ್ಯಮಣ್ಡಲ ಪರ್ಯನ್ತಕ್ಕೆ ಇರ್ಪತ್ತೈದು ಕೋಟಿ ಯೋಜನಮಾಗಿರ್ಕುಂ. ಅದರ್ಕೆ ಮೇಲೆ ಚಂದ್ರಮಂಡಲಂ ಒಂದು ಲಕ್ಷಯೋಜನದಲ್ಲಿಯುಂ, ಅದರ್ಕೆ ಮೇಲೆ ನಕ್ಷತ್ರಮಂಡಲಮೊಂದು ಲಕ್ಷಯೋಜನದಲ್ಲಿಯುಮಿರ್ಕುಂ. ಅದರ್ಕೆ ಮೇಲೆ ಎರಡು ಲಕ್ಷ ಯೋಜನದಲ್ಲಿ ಬುಧನುಂ, ಅದರ್ಕೆ ಮೇಲೆರಡು ಲಕ್ಷಯೋಜನದಲ್ಲಿ ಶುಕ್ರನುಂ, ಅದರ್ಕೆ ಮೇಲೆರಡು ಲಕ್ಷಯೋಜನದಲ್ಲಿ ಮಂಗಳನುಂ, ಅದರ್ಕೆ ಮೇಲೆರಡು ಲಕ್ಷ

ಯೋಜನದಲ್ಲಿ ಬೃಹಸ್ಪತಿಯುಂ, ಅದರ್ಕೆ ಮೇಲೆರಡು ಲಕ್ಷ ಯೋಜನ ದಲ್ಲಿ ಸಪ್ತರ್ಷಿಮಣ್ಡಲಮುಂ, ಅದರ್ಕೆ ಮೇಲೊಂದು ಲಕ್ಷ ಯೋಜನದಲ್ಲಿ ಜ್ಯೋತಿಶ್ಚಕ್ರಕೂಟಸ್ಥನಾದ ಧ್ರುವನುಮಿರ್ಕುಂ. ಅಂತು ಸೂರ್ಯಮಣ್ಡ ಲದಿಂದೆ ಧ್ರುವಮಣ್ಡಲಪರ್ಯನ್ತಂ ಪದಿನಾಲ್ಕು ಲಕ್ಷ ಯೋಜನಮುಂ ಸುವ ರ್ಲೋಕಮೆನಿಸಿ ಇಂದ್ರಾದಿ ದೇವತೆಗಳ ಸ್ಥಾನಮಾಗಿರ್ಕುಂ. ಅದರ್ಕೆ ಮೇಲೊಂದು ಕೋಟಿ ಯೋಜನಮುಂ ಮಹರ್ಲೋಕಮೆನಿಸಿ ಮೊದಲಿಂ ದ್ರಾದಿಪದದೊಳಿರ್ದು ಪಟ್ಟಮಂ ತೆಗೆದ ದೇವತೆಗಳ ಸ್ಥಾನಮಾಗಿರ್ಕುಂ. ಅದರ್ಕೆ ಮೇಲೆರಡು ಕೋಟಿ ಯೋಜನಮುಂ ಜನೋಲೋಕಮೆನಿಸಿ ಬ್ರಹ್ಮಪುತ್ರರಾದ ಸನಕಾದಿಮುನಿಗಳ ಸ್ಥಾನಮಾಗಿರ್ಕುಂ. ಅದರ್ಕೆ ಮೇಲೆಣ್ಟುಕೋಟಿ ಯೋಜನಮುಂ ತಪೋಲೋಕ ಮೆನಿಸಿ ಓಂಕಾರಾದಿ ಪರಮಮುಮುಕ್ಷುಗಳ ಸ್ಥಾನಮಾಗಿರ್ಕುಂ. ಅದರ್ಕೆ ಮೇಲೆ ಪನ್ನೆರಡುಕೋಟಿ ಯೋಜನಮುಂ ಸತ್ಯಲೋಕಮೆನಿಸಿ ಚತುರ್ಮುಖ ಬ್ರಹ್ಮಸ್ಥಾನಮಾ ಗಿರ್ಕುಂ. ಅದರ್ಕೆ ಮೇಲೊಂದು ಕೋಟಿಯುಮೆಣ್ಬತ್ತಾರು ಲಕ್ಷ ಯೋಜನಮುಂ ಬಯಲಾಗಿರ್ಕುಂ. ಅಂತು ಸೂರ್ಯಮಣ್ಡಲದಿಂದೆ ಮೇಗ ಣಣ್ಡಭಿತ್ತಿಪರ್ಯಂತಕ್ಕೆ ಇರ್ಪತ್ತೈದು ಕೋಟಿಯುಂ, ಕೆಳಗಣಣ್ಡ ಭಿತ್ತಿಪರ್ಯ ನ್ತಕ್ಕೆ ಇರ್ಪತ್ತೈದು ಕೋಟಿ ಯೋಜನಮುಮಾಗಿ, ಬ್ರಹ್ಮಾಣ್ಡಮೈವತ್ತು ಕೋಟಿ ಯೋಜನಮುದ್ದಮಾಗಿರ್ಕುಂ. ಇದಱೊಳ್ ನೆಲೆಯುಪ್ಪರಿಂಗೆ ಯನ್ತೆ ಪದಿನಾಲ್ಕುಂ ಭುವನಂಗಳೊಳಿರ್ಪ ಸಕಲಪ್ರಾಣಿಗಳ ಸ್ವರೂಪ ಸ್ಥಿತಿಪ್ರವೃತ್ತಿಗಳ್ಗೆ ನೀನೇ ಕಾರಣಮಾಗಿರ್ಪುದಱಿಂ ಸಕಲಭುವನಾಧಾರ ನೆನಿಸುವೈ. ಅದಱಿಂದೆ ಎನ್ನ ಸ್ವರೂಪರೂಪಸ್ಥಿತಿಗಳ್ ನಿನ್ನಧೀನಮಾ ಗಿರ್ಪುದೆಂದು ಪಿರಿಯರಿಂ ಕೇಳ್ದು, ಎನ್ನ ಹಿತಾಹಿತದೊಳಾಂ ಕೈದೆಗೆ ದಿರ್ಪೆಂ; ಎನ್ನಂ ಸಲಹುವ ಸೈಪು ನಿನ್ನದು ನಿನ್ನದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಪದಿನೈದನೆಯ ಬಿನ್ನಪಂ ॥

ಅರ್ಣವಭೂಧರತಟಿನೀ ।
ಕೀರ್ಣಧರಾವಲಯಮುನಿಕುಮಂ ಸಮೆದ್ದೈ ನೀಂ ॥
ನಿರ್ಣೀತವೊಂದು ಶೌರಿಗೆ ।
ಕರ್ಣಾಟಕಚಕ್ರವರ್ತಿ ಬಿನ್ನತಿಗೆಯ್ದಂ ॥ ॥೩೦॥

ಅಖಣ್ಡಭೂಮಣ್ಡಲಾಧೀಶ್ವರಾ! ಭೂಮಿ ಬಳಸಿ ಅಣ್ಡಭಿತ್ತಿ ಬಟ್ಟಿತ್ತಾಗಿರ್ಪುದರಿಂದಾವ ನಿಟ್ಟಿನೊಳಂ ಐವತ್ತು ಕೋಟಿ ಯೋಜನ ಮಾಗಿರ್ಕುಂ. ಅದೆಂತೆನೆ:—ಭೂಮಧ್ಯದೊಳ್ ಜಂಬೂದ್ವೀಪಂ ಬಟ್ಟೆತ್ತಾಗಿ ಆವ ನಿಟ್ಟಿನೊಳಂ ಲಕ್ಷ ಯೋಜನಪ್ರಮಾಣಮಾಗಿರ್ಕುಂ. ಈ ಜಂಬೂದ್ವೀಪ ಮಧ್ಯದೊಳ್ ಮಹಾಮೇರು ಸುವರ್ಣಮಯಮಾಗಿ ಕೆಳಗೆಪ್ಪತ್ತಿನಾಱು ಸಾವಿರ ಯೋಜನದಗಲಮುಂ, ಮಸ್ತಕದ ಮೇಲೆ ಮೂವತ್ತೆರಡು ಸಾವಿರ ಯೋಜನದಗಲಮುಮಾಗಿ ಚತುರಶ್ರಮಾಗಿ ಬೆಲ್ಲಮಂ ತಲೆಕೆಳಗಾಗಿರಿಸಿದಂತೆ ಇರ್ಪುದು. ಈ ಜಂಬೂದ್ವೀಪಮಂ ಬಳಸಿದ ಲವಣಸಮುದ್ರಮೊಂದು ಲಕ್ಷಯೋಜನದಗಲಮುಂ, ಇದಂ ಬಳಸಿದ ಪ್ಲಕ್ಷದ್ವೀಪ ಮೆರಡು ಲಕ್ಷ ಯೋಜನದಗಲಮುಂ, ಇದಂ ಬಳಸಿದ ಇಕ್ಷುಸಮುದ್ರ ಮೆರಡು ಲಕ್ಷ ಯೋಜನಮುಂ, ಇದಂ ಬಳಸಿದ ಶಾಲ್ಮಲಿದ್ವೀಪಂ ನಾಲ್ಕು ಲಕ್ಷಯೋಜನಮುಂ, ಇದಂ ಬಳಸಿದ ಸುರಾಸಮುದ್ರಂ ನಾಲ್ಕು ಲಕ್ಷ ಯೋಜನಮುಂ, ಇದಂ ಬಳಸಿದ ಕುಶದ್ವೀಪಂ ಎಣ್ಟು ಲಕ್ಷ ಯೋಜನಮುಂ, ಇದಂ ಬಳಸಿದ ಘೃತಸಮುದ್ರಂ ಎಣ್ಟು ಲಕ್ಷ ಯೋಜನಮುಂ, ಇದಂ ಬಳಸಿದ ಕ್ರೌಂಚದ್ವೀಪಂ ಪದಿನಾಱು ಲಕ್ಷ ಯೋಜನಮುಂ, ಇದಂ ಬಳಸಿದ ದಧಿಸಮುದ್ರಂ ಪದಿನಾಱು ಲಕ್ಷ ಯೋಜನಮುಂ, ಇದಂ ಬಳಸಿದ ಶಾಕದ್ವೀಪಂ ಮೂವತ್ತೆರಡು ಲಕ್ಷ ಯೋಜನಮುಂ, ಇದಂ ಬಳಸಿದ ಕ್ಷೀರಸಮುದ್ರಂ ಮೂವತ್ತೆರಡು ಲಕ್ಷ ಯೋಜನಮುಂ, ಇದಂ ಬಳಸಿದ ಪುಷ್ಕರದ್ವೀಪಂ ಅಱುವತ್ತುನಾಲ್ಕು ಲಕ್ಷ ಯೋಜನಮುಂ, ಇದಂ ಬಳಸಿದ ಸ್ವಾದೂದಕಸಮುದ್ರಂ ಅಱುವತ್ತು ನಾಲ್ಕು

ಲಕ್ಷ ಯೋಜನವಾಗಿರ್ಕುಂ. ಈ ಪರ್ಯನ್ತಂ ಮನುಷ್ಯಾದಿಪ್ರಾಣಿಗಳ ಸಂಚಾರಯೋಗ್ಯಮಾಗಿರ್ಕುಂ. ಇದಱ ಪೊಱವಲಯಂ ಪ್ರಾಣಿಸಂಚಾರಯೋಗ್ಯಮಲ್ಲದೆ ಕನ್ನಡಿಯನ್ತೆ ನಿರ್ಮಲವಾಗಿ ಸುವರ್ಣಮಯಮಾಗಿರ್ಪ ಭೂಮಿ ಪತ್ತು ಕೋಟಿಯುಂ ಪದಿನಾಲ್ಕು ಲಕ್ಷಯೋಜನದಗಲಮುಮಾಗಿರ್ಕುಂ. ಇದಂ ಬಳಸಿದ ಲೋಕಾಲೋಕ ಪರ್ವತಂ ಪತ್ತು ಸಾವಿರ ಯೋಜನದುದ್ದಮುಂ, ಪತ್ತು ಸಾವಿರ ಯೋಜನದಗಲಮುಮಾಗಿರ್ಕುಂ. ಇದಂ ಬಳಸಿದ ಅನ್ಧಕಾರ ಭೂಮಿ ಅಣ್ಡಕಟಾಹ ಪರ್ಯನ್ತಕ್ಕೆ ಪನ್ನೆರಡು ಕೋಟಿಯುಂ ಮೂವತ್ತೆರಡು ಲಕ್ಷಮುಂ ನಾಲ್ವತ್ತು ಸಾವಿರ ಯೋಜನದಗಲಮುಮಾಗಿರ್ಕುಂ. ಇಂತು ಭೂಮಧ್ಯದಿಂದವೊಂದು ದಿಕ್ಕಿನಣ್ಡಭಿತ್ತಿಪರ್ಯನ್ತಕ್ಕೆ ಇರ್ಪತ್ತೈದು ಕೋಟಿಯೋಜನವಿಸ್ತಾರಮಾಗಿರ್ಕುಂ. ಅದೆಂತೆನೆ:—ಜಮ್ಬೂದ್ವೀಪಮಧ್ಯದಿಂದೆ ಲವಣಸಮುದ್ರಪರ್ಯನ್ತಕ್ಕೆ ಅಯ್ವತ್ತುಸಾವಿರ ಯೋಜನಮುಂ ಮಿಕ್ಕಾಱು ದ್ವೀಪಂಗಳುಮೇೞುಂ ಸಮುದ್ರಂಗಳುಂ ಕೂಡಿ ಎರಡು ಕೋಟಿಯುಮೈವತ್ತಮೂಱು ಲಕ್ಷ ಯೋಜನಮುಂ, ಸುವರ್ಣಭೂಮಿ ಪತ್ತು ಕೋಟಿಯುಂ ಪದಿನಾಲ್ಕು ಲಕ್ಷ ಯೋಜನಮುಂ, ಲೋಕಾಲೋಕಪರ್ವತಂ ಪತ್ತು ಸಾವಿರ ಯೋಜನಮುಂ, ಅನ್ಧಕಾರಭೂಮಿ ಪನ್ನೆರಡು ಕೋಟಿಯುಂ ಮೂವತ್ತೆರಡುಲಕ್ಷಮುಂ ನಾಲ್ವತ್ತುಸಾವಿರ ಯೋಜನಮುಂ ಕೂಡಿ ಇರ್ಪತ್ತೈದು ಕೋಟಿ ಯೋಜನಮಾಗಿರ್ಕುಂ. ಇಂತು ಮೇರುಮಧ್ಯದಿಂದೊಂದು ನಿಟ್ಟು ಇರ್ಪತ್ತೈದು ಕೋಟಿ ಯೋಜನ ವಿಸ್ತಾರಮಾಗಿರ್ಪುದಱಿಂ ಭೂಮಣ್ಡಲ ಮಿತ್ತಣಣ್ಡಭಿತ್ತಿಯಿಂದತ್ತಣಂಡಭಿತ್ತಿ ಪರ್ಯನ್ತಕ್ಕೆ ಐವತ್ತು ಕೋಟಿ ಯೋಜನವಿಸ್ತಾರಮಾಗಿರ್ಕುಂ. ಇನ್ತಪ್ಪ ಭೂಮಂಡಲಂ ಪ್ರಳಯಾಮ್ಬುಧಿಯೊಳ್ ಮುೞುಂಗಿದಂದು ನೀಂ ಪೊತ್ತು ಪೊರೆದುದಱಿಂದ ಖಂಡಭೂಮಂಡಲಾಧೀಶ್ವರನೆನಿಸುವೈ. ನಿನ್ನೈಶ್ವರ್ಯಮಂ ಕಡೆಗಾಣ್ಬೊಡೆ ಅಂಬುಜಸಂಭವಾದಿಗಳ್ಗ ಮರಿದಾದೊಡಂ ಮಱುಕದಿಂದಾನೆನ್ನ ಬಿನ್ನಣ ಮಿರ್ದನಿತು ಬಿನ್ನವಿಪೆನಿದಂ ಮನ್ನಿಪುದು ಮನ್ನಿಪುದನನ್ಯಜನಸುಲಭ, ಶ್ರೀ ಯಾದುಶೈಲವಲ್ಲಭಾ !



|| ಪದಿನಾಱನೆಯ ಬಿನ್ನಪಂ ||

ಮೇದಿನಿಯೊಳೆಸೆವ ಸಗ್ಗದ |
ಭೇದಂಗಳನುಂಟುಮಾಡಿದೈ ನೀನೆಂದಾ ||
ಕೈದುವಿಡಿದರೊಳ್ಗಂಡಂ |
ಯಾದವಗಿರಿನಾಥನಡಿಗೆ ಬಿನ್ನತಿಗೆಯ್ದಂ || || ೩೧ ||

ನಿಖಿಲಭೋಗಪ್ರದಾ! ಭೋಗವೆಂಬುದು ಸುಖದುಃಖಾನುಭವಂ. ದುಃಖಾನುಭವದೇಶಂ ನರಕವೆನಿಪುದು; ಸುಖಾನುಭವದೇಶಂ ಸ್ವರ್ಗವೆನಿಪುದು. ಈ ಸುಖಾನುಭವಮಾದ ಸ್ವರ್ಗಂಗಳ್ ಪದಿನಾಲ್ಕುಂ ಲೋಕಂಗಳೊಳವೊಳವು. ಅವಱಲ್ಲಿ ಭೂಮಿಯೊಳಿರ್ಪ ಸ್ವರ್ಗಂಗಳ್ ಭೂಸ್ವರ್ಗಂಗಳೆನಿಪುವು. ಅವಾವುವೆಂದೊಡೆ:—ಜಮ್ಬೂದ್ವೀಪದ ನವ ವರ್ಷಂಗಳೊಳ್ ಭಾರತವರ್ಷಮೊಂದನುೞಿದು ಮಿಕ್ಕೆನೆಣ್ಬು ವರ್ಷಂಗಳುಂ, ವರ್ಷಪರ್ವತಂಗಳುಂ, ಮಹಾಮೇರುವುಂ, ಪ್ಲಕ್ಷಶಾಲ್ಮಲಿಕುಶ ಕ್ರೌಂಚಶಾಕಂಗಳೆಂಬಯ್ದುಂ ದ್ವೀಪಂಗಳೊಳಿರ್ಪ ಮೂವತ್ತೈದುಂ ವರ್ಷಂಗಳುಂ, ಅನಿತುಂ ವರ್ಷಪರ್ವತಂಗಳುಂ, ಪುಷ್ಕರದ್ವೀಪದೊಳಿರ್ಪ ಎರಡುಂ ವರ್ಷಂಗಳುಂ, ವರ್ಷಪರ್ವತವೊಂದುಂ ಇನಿತುಂ ಭೂಸ್ವರ್ಗಂಗಳೆನಿಪುವು. ಇವಱಲ್ಲಿ ಜಮ್ಬೂದ್ವೀಪದೊಳಿರ್ಪ ಎಣ್ಬುಂ ವರ್ಷಂಗಳೊಳಂ, ಪುಷ್ಕರದ್ವೀಪಮೊಳಿರ್ಪ ಎರಡುಂ ವರ್ಷಂಗಳೊಳಂ, ಮನುಜರೆಲ್ಲರ್ಗಂ ಪತ್ತು ಸಾವಿರ ಬರಿಸದಾಯುಸ್ಸುಂಟಾಗಿರ್ಕುಂ; ರೋಗಮುಂ ಈರ್ಷ್ಯಾಸೂಯಾದಿಗಳೊಂದುಮಿಲ್ಲದಿರ್ಕುಂ; ಎಲ್ಲರುಮುತ್ತಮಜಾತಿಯಾಗಿರ್ಪುದಱಿಂ ಜಾತಿಯೋಳ್ ಪೆರ್ಚುಕುಂದುಗಳಿಲ್ಲದಿರ್ಕುಂ; ಜಾತಿಭೇದಮಿಲ್ಲದುದಱಿಂದೆ ಆಚಾರಭೇದಮಿಲ್ಲದಿರ್ಕುಂ. ಇಲ್ಲಿರ್ಪ ಮನುಜರೆಲ್ಲರುಮಾವಗಂ ಪಸಿವುಂ ತೃಷೆಯುಮಿಲ್ಲದೆ ಪರಮಸಂತುಷ್ಟರಾಗಿ ದೇವತೆಗಳುಂ ತಾಮುಂ ಸಮಾನವೇಷಮುಂ, ಸಮಾನಬುದ್ಧಿಯುಂ, ಸಮಾನಶಕ್ತಿಯುಮಾಗಿರ್ಪರ್. ಪ್ಲಕ್ಷಶಾಲ್ಮಲಿಕುಶ ಕ್ರೌಂಚ ಶಾಕದ್ವೀಪಂಗಳೊಳಿರ್ಪ ಮೂವತ್ತೈದುಂ ವರ್ಷಂಗಳೊಳಂ, ವರ್ಷಪರ್ವತಂಗಳೊಳಂ, ಕಾಲಮಾವಗಂ ತ್ರೇತಾಯುಗಸಮಮಾಗಿಯೇ ಇರ್ಪುದು.

ಇಲ್ಲಿಯ ಮನುಷ್ಯರುಂ ದೇವಗಂಧರ್ವರುಮೊಡನಾಡುತ್ತೆ ಐದು ಸಾಸಿರಂ
ಬರಿಸದಾಯುಸ್ಸುಂಟಾಗಿ, ಆಧಿವ್ಯಾಧಿಗಳೊಂದುಮಿಲ್ಲದೆ ಸುಖದೊಳಿ
ರ್ಪರ್. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ಶುದ್ಧಜಾತಿಯವರಾಗಿ
ಸದಾಚಾರಸಂಪನ್ನರಾಗಿರ್ಪರಲ್ಲದೆ ಒರ್ವರುಂ ಸಂಕರಜಾತಿಯವರಲ್ಲದಿ
ರ್ಪರ್. ಇವಱೊಳಂ ಇಳಾವೃತವರ್ಷದೊಳ್ ಪಲವುಂ ಪಲವು ಭೋ
ಗಂಗಳ್ಗಾಸ್ಪದವಾಗಿ ರಮಣೀಯಮಾದ ಸ್ಥಾನಂಗಳಿರ್ಪುವು. ಅವಾವು
ವೆನೆ:—ಮಹಾಮೇರು ಚಲಿಸದಂತೆ ನಾಲ್ಕುಂ ದೆಸೆಯೊಳಂ ಬಲಿದ ಕೀಲ್ಗ
ಳಂತೆ ನಾಲ್ಕುಂ ಪರ್ವತಂಗಳಿರ್ಪುವು. ಅದಱೊಳ್ ಮೂಡದೆಸೆಯಲ್ಲಿ
ಮಂದರಪರ್ವತಮಿರ್ಪುದು. ಅದಱ ಮೇಲೆ ಸಾಸಿರ ನೂಱು ಯೋಜನ
ದುದ್ದಮಾದ ಕಡಬದ ಮರನಿರ್ಕುಂ. ಆ ಮರಕ್ಕೆ ಸಾಸಿರ ಪೆರ್ಗೊಂಬು
ಗಳುಂ ಪತ್ತು ಸಾಸಿರ ಕಿರ್ಗೊಂಬುಗಳುಮಾಗಿ ಸರ್ವಕಾಲದೊಳಂ ಪೂಗ
ಳುಂ ಫಲಂಗಳುಮುಂಟಾಗಿ ಬಳಸಿ ಸಾಸಿರ ಯೋಜನ ದಿವ್ಯಪರಿಮಳಮಾ
ಗಿರ್ಕುಂ. ಈ ಪರ್ವತದೊತ್ತಿನೊಳ್ ಮೂಡಲಾಗಿ ಚೈತ್ರರಥವೆಂಬ ಸಿಂ
ಗರದೋಂಟಮುಂ, ಅರುಣೋದವೆಂಬ ಸರಸ್ಸುಮಿರ್ಕುಂ. ಮೇರು
ವಿಂಗೆ ತೆಂಕಲಾಗಿ ಗನ್ಧಮಾದನವೆಂಬ ಪರ್ವತಮಿರ್ಕುಂ. ಅದಱ ಮೇಲೆ
ಸಾವಿರದ ನೂಱು ಯೋಜನದುದ್ದಮಾದ ನೇಱಲ ಮರನಿರ್ಕುಂ.
ಇದಱ ಕೊಂಬುಗಳಿಂ ಸ್ವಾದುವಾಗಿ ಮೃದುವಾಗಿ ಸುಗನ್ಧಯುಕ್ತ
ಮಾಗಿ ಮಹಾಗಜಪ್ರಮಾಣಮಾಗಿರ್ಪ ಪಣ್ಗಳ್ ಪಾಸಱೆಯೊಳ್
ಬಿೞ್ದು ಕರಗಿ ಜಮ್ಬೂನದಿಯೆಂಬ ಪೊೞೆಯಾಗಿ ಮೇರುವಂ ಬಳಸಿ
ಪೊನಲ್ ಪರಿಯುತಿರ್ಕುಂ. ಅದಱ ತಡಿಯ ಮಣ್ಗಳ್ ಅರಸದಿಂ ನನೆ
ದುದಱಿಂ ಜಾಂಬೂನದ ಸ್ವರ್ಣಮಾಗಿ ದೇವಭೂಷಣಯೋಗ್ಯಮಾ
ಗಿರ್ಕುಂ. ಅದಱ ತೆಂಕಣ ತಡಿಯೊಳ್ ಗನ್ಧಮಾದನವೆಮ್ಬ ಸಿಂಗರ
ದೋಂಟಮುಂ ಮಾನಸವೆಮ್ಬ ಸರಸ್ಸುಮಿರ್ಕುಂ. ಮೇರುವಿಂಗೆ ಪಡು
ವಲಾಗಿ ವಿಪುಲವೆಂಬ ಪರ್ವತಮಿರ್ಕುಂ. ಅದಱ ಮೇಲೆ ಸಾಸಿರದ
ನೂಱು ಯೋಜನದುದ್ದಮಾದ ಅರಳಿಯ ಮರನಿರ್ಕುಂ. ಅದಱ ಪಣ್ಗ
ಳ್ ಸರ್ವಕಾಲಮುಂ ಮಹಾಕುಂಭಪ್ರಮಾಣಮಾಗಿ ಪರಿಮಳಯುಕ್ತ
ಮಾಗಿರ್ಕುಂ. ಅದಕ್ಕೆ ಪಡುವಲಾಗಿ ವೈಭ್ರಾಜವೆಂಬ ಸಿಂಗರದೋಂ

ಟಿಮುಂ ಸಿತೋದಮೆಂಬ ಸರಸ್ಸುಮಿರ್ಕುಂ. ಮೇರುವಿಂಗೆ ಬಡಗಲಾಗಿ ಸುಪಾರ್ಶ್ವಮೆಂಬ ಪರ್ವತಮಿರ್ಕುಂ. ಅದಱ ಮೇಲೆ ಸಾವಿರದ ನೂಱು ಯೋಜನದದ್ದುಮಾದ ಆಲದ ಮರನಿರ್ಕುಂ. ಅದಱ ಪಣ್ಗಳ್ ಸರ್ವ ಕಾಲಮುಂ ಮಹಾಕುಂಭಪ್ರಮಾಣಮಾಗಿ ಪರಿಮಳಯುಕ್ತಮಾಗಿರ್ಕುಂ. ಅದಱಿತ್ತಿನೊಳ್ ನಂದನಮೆಂಬ ಸಿಂಗರದೋಣ್ಟಮುಂ ಸೀತೋದಮೆಂಬ ಸರಸ್ಸುಮಿರ್ಕುಂ. ಈ ನಾಲ್ಕುಂ ಪರ್ವತಂಗಳ ಪೊಱವಳಯದೊಳ್ ಪಲವುಂ ಬೆಟ್ಟಂಗಳಿರ್ಪುವು. ಇವು ತಾವರೆಯ ಕೇಸರಗಳ ಮರ್ಯಾದೆಯಾಗಿರ್ಪುದಱಿಂ ಕೇಸರಪರ್ವತಂಗಳೆನಿಪುವು. ಅವಾವುವೆನೆ :—ಮೇರುವಿಂಗೆ ಮೂಡಲಾಗಿ ಸಿತಾಂಭ, ಉದಕಂಜ, ಮಾರ್ಷ, ವಿರುಂಗ, ಮಣಿಶೃಂಗ, ಸಬಿನ್ದು, ಮಂದರ, ವೇಣುಮಂತ, ಸಮೇಘ, ನಿಷಧ, ದೇವಪರ್ವತಮೆಂಬೀ ಪರ್ವತಂಗಳಿರ್ಕುಂ. ಮೇರುವಿಂಗೆ ತೆಂಕಲಾಗಿ ತ್ರಿಶಿರ, ತ್ರಿಶೃಂಗ, ಕಪಿಂಗ, ಪತಂಗ, ಕುಚಕ್ರ, ತಾಂಮ್ರಾಭ, ವಿಶಾಲ, ಶ್ವೇತಧರ, ಸಮೂಲ, ವಸುಧಾರಾ, ರತ್ನಧಾರಾ, ಏಕಶೃಂಗ, ಮಹಾಮೂಲ, ಗಜಶೈಲ, ಪಿಶಾಚಕ, ಪಂಚಶೈಲ, ಕೈಲಾಸ, ಹಿಮವಂತಮೆಂಬೀ ಪರ್ವತಂಗಳಿರ್ಕುಂ. ಮೇರುವಿಂಗೆ ಪಡುವಲಾಗಿ ಕಪಿಲ, ಪಿಂಜಕ ಭದ್ರ, ಸುರಸ, ಮಹಾಬಲ ಕುಮುದ, ಮಧುಮಂತ, ಅಂಜನ, ಮಕುಟ, ಕೃಷ್ಣ ಪಾಂಡರ, ಸಹಸ್ರಶಿಖರ, ಪಾರಿಯಾತ್ರ, ತ್ರಿಶೃಂಗಮೆಂಬೀಪರ್ವತಂಗಳಿರ್ಕುಂ. ಮೇರುವಿಂಗೆ ಬಡಗಲಾಗಿ ಶಂಖಕೂಟ, ನಿಷಧ, ಹಂಸ, ನಾಗ, ಕಪಿಂಗ, ಇಂದ್ರಶೈಲ, ನೀಲ, ಕನಕಶೃಂಗ, ಶತಶೃಂಗ, ಪುಷ್ಕರ, ಮೇಘಶೈಲ, ವಿರಜ, ಜಾರುಧಿ, ತ್ರಿಶೃಂಗಮೆಂಬೀಪರ್ವತಂಗಳಿರ್ಕುಂ. ಈ ಕೇಸರಪರ್ವತಂಗಳ ತಪ್ಪಲ್ಗಳೊಳ್ ರಮಣೀಯಮಾಗಿ ದೇವತೆಗಳ್ಗೆ ಕ್ರೀಡಾಸ್ಥಾನಂಗಳಾಗಿರ್ಕುಂ. ಅವಾವುವೆನೆ:—ಮೇರುವಿಂಗೆ ಮೂಡಲಾಗಿ, ಸಿತಾಂಭಕುಮುದಪರ್ವತಂಗಳ ನಡುವೆ ಮುನ್ನೂಱು ಯೋಜನದ ನೀಳಮುಂ ನೂಱು ಯೋಜನದಗಲಮುಮಾಗಿ ಸ್ವಾದುವಾಗಿ ನಿರ್ಮಲಮಾಗಿರ್ದ ಜಲದಿಂ ಪೂರ್ಣಮಾದ ಶ್ರೀಸರಸ್ಸೆಂಬ ಕೊಳನಿರ್ಕುಂ. ಅದಱೊಳ್ ಕೊಳಗದ ತೋರಮಾದ ತಾವರೆಗಳಿರ್ಕುಂ. ಅದಱೊಳ್ ಕೋಟಿದಳಯುಕ್ತಮಾಗಿ ಸ್ವರ್ಣಮಯಮಾದುದೊಂದು ತಾವರೆಯೊಳ್

ಸಾಕ್ಷಾನ್ಮಹಾಲಕ್ಷ್ಮಿ ಇರುತಿರ್ಪಳ್. ಈ ಕೊಳದೊತ್ತಿನೊಳ್ ನೂಱು ಯೋಜನದಗಲಮುಂ ಇನ್ನೂಱುಯೋಜನದ ನೀಳಮುಮಾದ ಬೆಲ್ಲವತ್ತದ ವನಮಿರ್ಕುಂ. ಅದಱೊಳ್ ಮರಂಗಳಾವಗಂ ಫಲಪುಷ್ಪಯುಕ್ತಮಾಗಿ ಆರೆಕೂಗುದಾರಿಯುದ್ದಮಾಗಿರ್ಕುಂ. ಅಲ್ಲಿಯುಂ ಮಹಾಲಕ್ಷ್ಮಿ ಸಿದ್ಧಸಂಗನಿಷೇವಿತೆಯಾಗಿರ್ಪುದಱಿಂದಾವನಕ್ಕೆ ಶ್ರೀವನವೆಂಬ ಪೆಸರಾಗಿರ್ಕುಂ. ಮತ್ತಂ ವೈಕಂಕ ಮಣಿಶೈಲವೆಂಬೀಪರ್ವತಂಗಳ ನಡುವೆ ಇನ್ನೂಱುಗಾವುದ ನೀಳಮುಂ ನೂಱುಗಾವುದದಗಲಮುಮಾಗಿ ನಿರ್ಮಲೋದಕಮಾದುದೊಂದು ದೊಣೆಯಿರ್ಕ್ಕುಂ. ಅದಱ ತಡಿಯೊಳರೆಕೂಗುದಾರಿಯುದ್ದಮಾದ ಪಲವುಂ ಮರಗಳಿಂದೆಸೆವುದೊಂದು ಮಹಾವನಮಿರ್ಕುಂ. ಅದಱ ನಡುವೆ ಕಾಶ್ಯಪಮುನಿಗಾಶ್ರಮಮಾಗಿರ್ಕುಂ. ಮತ್ತಂ ಮಹಾನೀಲಕುಂಡಶೈಲಂಗಳ ನಡುವೆ ಪದ್ಮಷಂಡೋಪಶೋಭಿತಮಾದ ಸುಖನದಿಯೆಂಬುದೊಂದು ಕೊಳನಿರ್ಕುಂ. ಅದಱ ತಡಿಯೊಳೈವತ್ತು ಯೋಜನದ ನೀಳಮುಂ ಮೂವತ್ತು ಯೋಜನದಗಲಮುಮಾದ ಹನೆಯ ಮರದ ಬನಮಿರ್ಕುಂ, ಆಮರಂಗಳರೆಕೂಗುದಾರಿಯುದ್ದಮಾಗಿರ್ಕುಂ. ದೇವಶೈಲವೆಂಬ ಬೆಟ್ಟದ ತಪ್ಪಲೊಳ್ ಗಿಡಮರಂಗಳೊಂದುಮಿಲ್ಲದೆ ಸಾವಿರಗಾವುದ ನೀಳಮುಂ ನೂರು ಗಾವುದದಗಲಮುಂ ಸಮತಳಮಾದುದೊಂದು ಕಲ್ಲಱೆಯಾಗಿ ಅದಱ ಮೇಲೆ ಮೊಟಕಾಲುದ್ದ ನೀರುಂಟಾಗಿ ಐರಾವತಕ್ಕೆ ಕ್ರೀಡಾಸ್ಥಾನಮಾಗಿರ್ಕುಂ. ಇವನಿತುಂ ಮೇರುವಿಂಗೆ ಮೂಡಲಾಗಿರ್ಪ ತಾಣಂಗಳ್. ಮೇರುವಿಂಗೆ ತೆಂಕಲಾಗಿ ತ್ರಿಶಿರಪತಂಗಶೈಲಂಗಳ ನಡುವೆ ಸಿಹಿಯಾಗಿ ತಿಳಿನೀರುಂಟಾದ ಬಹೂದಕಮೆಂಬ ಪೊಱೆ ಪರಿಪುತಿರ್ಕುಂ. ಅದಱ ತಡಿಯೊಳ್ ನೂಱುಗಾವುದ ನೀಳಮುಂ ಮೂವತ್ತು ಗಾವುದದಗಲಮುಮಾದ ಅತ್ತಿಯ ಕಾಡಿರ್ಕುಂ. ಆ ಮರಂಗಳೊಂದಂಬಿನಿಸುಗೆಯುದ್ದಮಾಗಿ ಪವಳವರ್ಣಮಾದ ಹಱವಿಯ ತೋರಮಾದ ಪಣ್ಗಳುಂಟಾಗಿ ಕರ್ದಮಪ್ರಜಾಪತಿಗಾಶ್ರಮಮಾಗಿರ್ಕುಂ. ತಾಮ್ರಾಭ ಪತಂಗಶೈಲಂಗಳ ನಡುವೆ ನೂಱುಗಾವುದ ನೀಳಮುಂ, ನೂಱುಗಾವುದದಗಲಮುಮಾದ ಸರಸ್ಸುಮಿರ್ಕುಂ. ಅದಱೊಳ್ ಕೆಂದಾವರೆಗಳ್ ಬಾಲಸೂರ್ಯನಂತೆ ಪ್ರಕಾಶಮಾಗಿರ್ಕುಂ. ಆ

ಸರೋಮಧ್ಯದೊಳಿರ್ಪುದೊಂದು ಬೆಟ್ಟದ ಮೇಲೆ ಕೋಟೆಕೊತ್ತಳಗಳಿಂ ದೊಪ್ಪುವುದೊಂದು ವಿದ್ಯಾಧರಪುರಮಿರ್ಕುಂ. ವಿಶಾಲ ಶ್ವೇತಪರ್ವತಂಗಳ ನಡುವೆ ಮೂವತ್ತು ಗಾವುದದಗಲವುಂ ಐವತ್ತು ಗಾವುದ ನೀಳಮುಮಾಗಿರ್ಪುದೊಂದು ಕೊಳನಿರ್ಕುಂ. ಅದಱ ತಡಿಯೊಳೊಂದು ದೊಡ್ಡಿತಾದ ಮಾವಿನ ಮರನಿರ್ಕುಂ. ಅದಱೊಳ್ ಮಾವಿನ ಪಣ್ಗಳ್ ಸುವರ್ಣಸಂಕಾಶಮಾಗಿ ಅತ್ಯಂತಪರಿಮಳಯುಕ್ತಮಾಗಿ ಹ ಱ ವಿ ಯ ತೋರಮಾಗಿರ್ಕುಂ. ವಸುಧಾರಾ ರತ್ನಧಾರ ಪರ್ವತಂಗಳ ನಡುವೆ ಮೂವತ್ತು ಗಾವುದ ನೀಳವುಂ ನೂಱುಗಾವುದದಗಲವುಮಪ್ಪುದೊಂದು ಮುಲ್ಲುಗದ ಬನಮಿರ್ಕುಂ. ಅದಱ ಪೂಗಳಾವಗಂ ನೂಱುಗಾವುದ ಪರ್ಯಂತಂ ಪರಿಮಳಿಸುತಿರ್ಕುಂ. ಅದಱೊಳ್ ಸೂರ್ಯಂಗಾಶ್ರಮಮಾಗಿರ್ಕುಂ. ಮೇರುವಿಂಗೆ ಪಡುವಲಾಗಿ ಸುಪಾರ್ಶ್ವಶಿಖಿ ಪರ್ವತಂಗಳ ನಡುವೆ ನೂಱುಗಾವುದದಗಲವುಂ ನೂಱುಗಾವುದ ನೀಳವುಂ ಬೆಂಕೆಯಿಂ ಬೆಂದ ಬಿಸಿಯ ನೆಲನಾಗಿರ್ಕುಂ. ಅದಱ ನಡುವೆ ಇರ್ಪತ್ತುಗಾವುದ ನೆಲಂ ವಹ್ನಿಮಂಡಲಮಾಗಿರ್ಕುಂ. ಅದಱೊಳಾವಗಂ ಪ್ರಳಯಕಾಲಾಗ್ನಿ ಸೌದೆಯಿಲ್ಲದೆ ಉರಿಯುತಿರ್ಕುಂ. ಕುಮುದಾಂಜನ ಪರ್ವತಂಗಳ ನಡುವೆ ಪುಣ್ಯಹ್ರದಮೆಂಬ ಕೊಳನಿರ್ಕುಂ. ಅದಱ ತೀರದಲ್ಲಿ ಪತ್ತು ಗಾವುದದಗಲವುಂ ಪತ್ತು ಗಾವುದ ನೀಳವುಮಪ್ಪ ಮಾದಳದ ವನಮಿರ್ಕುಂ. ಅದಱೊಳಾವಗಮರಿಸಿನ ಬಣ್ಣಮಾಗಿ ಪಿರಿದಾದ ಪಣ್ಗಳಿರ್ಕುಂ. ಅದಱೊಳ್ ಬೃಹಸ್ಪತಿಗಾಶ್ರಮಮಾಗಿರ್ಕುಂ. ಪಿಂಜರ ಸುರಸಪರ್ವತಂಗಳ ನಡುವೆ ಅನೇಕ ಯೋಜನದ ನೀಳವುಂ ಅನೇಕ ಯೋಜನದಗಲವುಮಪ್ಪ ಮಹಾದ್ರೋಣಿಯೆಂಬ ಕೊಳನಿರ್ಕುಂ. ಅದಱೊಳ್ ವಿಷ್ಣುವಿಂಗೆ ತಾಣಮಾಗಿರ್ಕುಂ. ಕೃಷ್ಣಪಾಂಡರ ಪರ್ವತಂಗಳ ನಡುವೆ ಮೂವತ್ತುಗಾವುದದಗಲವುಂ ತೊಂಬತ್ತು ಗಾವುದ ನೀಳವುಮಾಗಿ ಮರಗಿಡುಗಳೊಂದುಮಿಲ್ಲದೆ ನಿಷ್ಪಂಕದೀರ್ಘಿಕೆಯೆಂಬ ಕೊಳನಿರ್ಕುಂ. ಅದಱೊಳ್ ಐಗಾವುದದಗಲವಪ್ಪ ಆಲದ ಮರನಿರ್ಕುಂ. ಆ ಮರದೊಳ್ ಚಂದ್ರವರ್ಣನಾಗಿ ನೀಲವಸ್ತ್ರಧರನಾದ ಸಹಸ್ರವದನನೆಂಬ ಸ್ವಾಮಿ ಯಕ್ಷಾದಿಗಳಿಂದಾವಗಂ ಪೂಜಿಸಲ್ಪಡುತಿರ್ಪಂ. ಸಹಸ್ರಶಿಖರ ಕುಮುದಪರ್ವತಂ

ಗಳ ನಡುವೆ ಐವತ್ತು ಗಾವುದದಗಲವಾದ ಪಲವುಂ ಸಿಹಿವಣ್ಣ್ಗಳುಂಟಾದ ವನಮಿರ್ಕುಂ. ಅದಱೊಳ್ ಚಂದ್ರಂಗಾಶ್ರಮಮಾಗಿರ್ಕುಂ. ಮೇರುವಿಂಗೆ ಬಡಗಲಾಗಿ ಶಂಖಕೂಟನಿಷಧಪರ್ವತಂಗಳ ನಡುವೆ ಅನೇಕಯೋಜನದಗಲವಾದ ಪುರುಷಸ್ಥಲವೆಂಬ ಸ್ಥಾನಮಿರ್ಕುಂ. ಅದಱೊಳ್ ಮರಂಗಳನೇಕಯೋಜನದುದ್ದವಾಗಿರ್ಕುಂ. ಕಪಿಂಗನಾಗ ಪರ್ವತಂಗಳ ನಡುವೆ ನೂಱು ಗಾವುದದಗಲಮುಂ ಇನ್ನೂಱು ಗಾವುದದ ನೀಳಮುಮಾಗಿ ದ್ರಾಕ್ಷಾ ಖರ್ಜೂರದ ವನಮಿರ್ಕುಂ. ಅದಱೊಳಾವಗಂ ಪಣ್ಗಳ್ ಅತ್ಯಂತ ಮಧುರಮಾಗಿರ್ಕುಂ. ಪುಷ್ಕರಮೇಘಪರ್ವತಂಗಳ ನಡುವೆ ನೂಱುಗಾವುದ ನೀಳಮುಂ ಅಱುವತ್ತು ಗಾವುದದಗಲಮುಮಾದ ಕಲ್ಲಱೆಯಿರ್ಕುಂ. ಅದಱೊಳ್ ನಾಲ್ಕು ದಿಕ್ಕಿನೊಳಂ ಅನೇಕ ಯೋಜನ ವಿಶಾಲಾಯತವಾದ ನಾಲ್ಕು ಕೊಳಂಗಳುಂ ನಾಲ್ಕು ವನಂಗಳುಮಿರ್ಕುಂ. ಕೇಶರಮರ್ಯಾದಾಪರ್ವತಂಗಳ ಮೇಲೆ ಎಣ್ಬಗೆಯ ದೇವತೆಗಳ ಪಟ್ಟಣಂಗಳಿರ್ಕುಂ. ಇವಿನಿತುಂ ಭೋಗಭೂಮಿಗಳೆನಿಕುಂ. ಇವಱೊಳನುಭವಿಸುವ ಭೋಗಮನಿತ್ಯಮಾದುದಱಿಂದೆ ಆನಿವಂ ಬಯಸಿದವನಲ್ತು; ನಿತ್ಯಭೋಗಮೆನಿಪ ನಿನ್ನೂೞಿಗಮನೆ ಬಯಸಿದೆಂ. ನಿಖಿಲಭೋಗಪ್ರದನಪ್ಪ ನೀನೆನಗಿದಂ ನೆಲೆಗೊಳಿಪುದು, ನೆಲೆಗೊಳಿಪುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ !



## ॥ ಪದಿನೇೞನೆಯ ಬಿನ್ನಪಂ ॥

ನರಕದೊಳಿೞಿವರೆ ತಾವಕ।
ಚರಣಾಬ್ಜಕೆ ಮಣಿದರಲ್ತು ಮುನ್ನೊರ್ಮೆಯುಮೆಂ ॥
ದುರುವಿಕ್ರಮನಡಿದಾವರೆ।
ಗರಿನೃಪವೇಶ್ಯಾಭುಜಂಗನನುಗೊಳೆ ಪೇೞ್ದಂ ॥ ॥ ೩೨ ॥

ನರಕಾನ್ತಕಾ! ನರಕಮೆಂಬುದು ದುಃಖಾನುಭವಸ್ಥಾನಂ. ಈ ನರಕಂಗಳ್ ಸಪ್ತಪಾತಾಳಲೋಕಂಗಳ ಕೆಳಗಣ ಗರ್ಭೋದಕಕ್ಕೆ ಕೀೞಾಗಿಯುಂ ಬ್ರಹ್ಮಾಣ್ಡಕಟಾಹಮಂ ಪತ್ತಿದ ಗರ್ಭೋದಕಕ್ಕೆ ಮೇಲಾಗಿಯುಮಿರ್ಪ ಬಯಲೊಳ್ ತೆಂಕಣ ದೆಸೆಯೊಳಿರ್ಪ ರೌರವ ಸೂಕರ ರೋಧಮೆಂಬಿವು ಮೊದಲಾಗಿ ಪಲವುಂ ತೆಱನಾಗಿರ್ಕುಂ. ರೌರವಮೆಂಬ ನರಕದೊಳಿರ್ದವನಂ ಯಮಭಟರ್ ಪುಲ್ಲೆಯಂ ಬೇಂಟೆಕಾಱರಿಸುವಂತೆ ದಯೆಯಿಲ್ಲದೆ ಆವಗಮಿಸುತಿರ್ಪರ್. ತಾಂ ಸಾಕ್ಷಿಯಾಗಿರ್ದುಂ ಕಂಡಂತೆ ನುಡಿಯುದವನುಂ, ಕಾಣದುದಂ ನುಡಿದವನುಂ, ಧರ್ಮಾಧಿಕಾರದೊಳ್ ನಿಂದು ಪಕ್ಷಪಾತಂಗೆಯ್ವವನುಂ, ಪುಸಿಗಾಱನುಂ ಈ ನರಕದೊಳ್ ಬೀೞ್ವರ್. ಬೇಂಟೆಯೊಳ್ ಸಿಲ್ಕಿದ ಪಂದಿಯನಿಱಿವಂತೆ ಆವಗಮಿಱಿಯುತಿರ್ಪರ್. ಆ ನರಕಂ ಸೂಕರಮೆನಿಪುದು. ಗರ್ಭಮಂ ಕರಗಿಸಿದವನುಂ, ಮೂಗು ಬಾಯ್ಗಳಂ ಮುಚ್ಚಿಕೊಲ್ವವನುಂ, ಗೋಹತ್ಯೆಗೆಯ್ವವನುಂ, ಇದಱೊಳ್ ಬೀೞ್ವರ್. ನೆಲೆವನೆಗೆಯ್ದು ಪಲದೊಳ್ ಪೊೞ್ವರ ನರಕಂ ರೋಧಮೆನಿಪುದು. ಬ್ರಹ್ಮಹತ್ಯಾ ಸುರಾಪಾನ ಸ್ವರ್ಣಸ್ತೇಯ ಗುರುತಲ್ಪಗಮನ ತತ್ಸಂಯೋಗಂಗಳೆನಿಪ ಪಂಚಮಹಾಪಾತಕಂಗಳಂ ಮಾಡಿದವರಿದಱೊಳ್ ಬೀೞ್ವರ್. ಉನ್ನತಮಾದ ಹನೆಯ ಮರನಿಂ ನೆಲಕ್ಕೆ ಕೆಡಪುವ ನರಕಂ ತಾಳಮೆನಿಪುದು. ಕ್ಷತ್ರಿಯ ವೈಶ್ಯರ್ಕಳಂ ಕೊಂದವರಿದಱೊಳ್ ಬೀೞ್ವರ್. ಕಾಯ್ದೆಣ್ಣೆಯ ಕೊಪ್ಪರಿಗೆಯೊಳ್ ಕುದಿಯಿಸುವ ನರಕಂ ತಪ್ತಕುಂಭಮೆನಿಕ್ಕುಂ. ಪತಿವ್ರತೆಯುಂ ಮಾಱಿದವನುಂ ಕುದುರೆಯಂ ಕೊಂದು ಮಾಱುವವನುಂ, ನಂಬಿದವರಂ ಕೈ ಬಿಡುವ

ವನುಂ, ಒಡವುಟ್ಟಿದವಳ್ಗಳುಪಿದವನುಂ, ಅರಮನೆಯ ಮನುಷ್ಯರಂ ಮಡುಪಿದವನುಂ ಇದಱೊಳ್ ಬೀೞ್ವರ್. ಬೆಂಕಿಯೊಳ್ ಪುೞುದು ಚೌಳುಪ್ಪಿನೊಳ್ ಪೊರಳಿಪ ನರಕಂ ಲವಣಮೆನಿಕ್ಕುಂ. ತಂದೆತಾಯ್ ಮೊದಲಾದ ಪಿರಿಯರಂ ದೂಷಿಸುವನುಂ, ವೇದಮಂ ನಿಂದಿಪನುಂ, ಕೂಲಿಗೆ ವೇದಮನೋದಿಪನುಂ, ಸೋದರವಾವನ ಪೆಣ್ಡತಿಗಳುಪಿದ ವನುಂ, ಇದಱೊಳ್ ಬೀೞ್ವರ್. ಕತ್ತಲೆ ಮುಸುಂಕಿದೆಡೆಯೊಳ್ ಕಾಡ ನೊಣ ಜಿಗುಟೆ ಮೊದಲಾದ ಕ್ರೂರಜನ್ತುಗಳೆಡೆವಿಡದೆ ಕಡಿವ ನರಕಂ ಕ್ರಿಮಿಭಕ್ಷಮೆನಿಪುದು. ದೇವಬ್ರಾಹ್ಮಣದ್ವೇಷಿಯುಂ, ಸದಾಚಾರಮಂ ಪಾಣ್ದವನುಂ ಇದಱೊಳ್ ಬೀೞ್ವರ್. ಪೞುಗುಟ್ಟಿ ನೀರಂ ಭಕ್ಷಿಸುವ ನರಕಂ ಲಾಲಾಭಕ್ಷಮೆನಿಪುದು. ದೇವಪೂಜೆಯುಂ, ಪಿತೃಕರ್ಮಂ ಮೊದಲಾದುದೊಂದುಮಿಲ್ಲದೆ ತನಗೆಂದಟ್ಟುಣ್ಬವರಿದಱೊಳ್ ಬೀೞ್ವರ್. ಕತ್ತಿ ಚೂರಿ ಮೊದಲಾದ ಅಲಗುಗಳ್ ನಟ್ಟಿರ್ಪ ಬಾವಿಯೊಳ್ ನೂಕುವ ನರಕಂ ವಿಶಸನಮೆನಿಪುದು. ಆಯುಧಂಗಳಂ ಮಾಡಿ ಬರ್ದುಂಕುವ ವರುಂ, ಬೇಹುಕಂಬು ಮೊದಲಾದ ಕಪಟದಾಯುಧಂಗಳಂ ಧರಿಸಿದ ವರುಂ ಇದಱೊಳ್ ಬೀೞ್ವರ್. ಕಾಸಿದ ಸಂಕಲೆಯಂ ಕಾಲ್ಗೆ ತುಡಿಸಿ ಉರಿಮಸಗುವ ಬಾವಿಯೊಳ್ ತಲೆಕೆಳಗುಮಾಡಿ ತೂಗುವ ನರಕಂ ಅಧೋಮುಖಮೆನಿಪುದು. ಶಾಸ್ತ್ರನಿಷಿದ್ಧವಸ್ತುಗಳಂ ಪರಿಗ್ರಹಿಸುವರಿದಱೊಳ್ ಬೀೞ್ವರ್. ಪೊಲಸುನಾಱುವ ಕೀವಿನತೊಱೆಯ ನರಕಂ ಪೂಯವಹಮೆನಿಪುದು. ದುಡುಕುಗಾಱನುಂ, ಎಲ್ಲರಂ ಬಿಟ್ಟು ತಾನೊರ್ವನೆ ಮೃಷ್ಟಾನ್ನಮನುಣ್ಬವನುಂ, ಅಡಗು ಮಾಂಸಂ ಪಾಲ್ ಮೊಸಱ್ ತುಪ್ಪ ಜೇನ್ ಮೊದಲಾದ ಸದ್ದ್ರವ್ಯಮುಮಂ ಎಳ್ಳುರ್ಪು ಮೊದಲಾದುವಂ ಮಾಱುವ ವನುಂ ಇದಱೊಳ್ ಬೀೞ್ವರ್. ಕಾಸಿದ ಕೀವುಂ ನೆತ್ತರುಂ ತೀವಿದ ಬಾವಿ ರುಧಿರಾಂಭಸನರಕಮೆನಿಪುದು. ತಗಱು ಕೋೞಿ ಮುಂತಾದುವಂ ಜೂದುಗಾಳೆಗಕ್ಕೆ ಬಿಡುವವನಂ, ಆಟ್ಟಮಡಿಕೆಯೊಳೆ ಉಣ್ಬವನುಂ, ವಿಷಮನಿಕ್ಕುವವನುಂ, ಅರಸುಗಳ ಸಂಗಡಮಿಲ್ಲದ ಚಾಡಿಗಳಂ ಪೇೞ್ವವನುಂ, ಪೆಂಡತಿ ಸಂಪಾದಿಸಿದೊಡವೆಯಿಂ ಬರ್ದುಂಕುವವನುಂ, ಅಮಾವಾಸ್ಯೆ ಸಂಕ್ರಮಣಂ ಮೊದಲಾದ ಪರ್ವಕಾಲದೊಳ್ ಅಭ್ಯಂಗಂ ಸ್ತ್ರೀಸಂಗಂ

ಮೊದಲಾದುವನೆಸಗಿದವನುಂ, ಮನೆಗಳಂ ಕಿರ್ಚಿಕ್ಕಿ ಸುಡುವವನುಂ, ಪಕ್ಕಿಯ ನಿಮಿತ್ತಮಂ ಪೇೞ್ವವನುಂ,(?) ಪಕ್ಕಿಗಳಂ ಪಿಡಿದು ಮಾಱಿ ಬರ್ದುಂಕುವವನುಂ, ಗ್ರಾಮಯಾಜಕನುಂ ಇದಱೊಳ್ ಬೀೞ್ವರ್. ಬೆಂಕಿಯಂತೆ ಕಾಯ್ದು ತುಪ್ಪದ ತೊಱೆ ವೈತರಣಿಯೆನೆಪುದು. ಜೇನನಱುವವನುಂ, ಗ್ರಾಮಕ್ಕೆ ಕೇಡನೆಣಿಸುವವನುಮಿದಱೊಳ್ ಬೀೞ್ವರ್. ಕಾಯ್ದ ಕರ್ಬುನದ ಮೊಳೆಗಳಂ ನಾಂಟಿರ್ಪ ನೆಲದೊಳ್ ನಡೆವ ನರಕಂ ಕೃಷ್ಣಮೆನಿಪುದು. ಧನದಿಂದೆಯುಂ, ಯೌವನದಿಂದೆಯುಂ ಕೊರ್ಬಿ ಮೇರೆಯಂ ಮೀಱಿ ನಡೆವವನುಂ, ಎಂಜಲುಮೈಲಿಗೆಗಳ್ಗೆ ಪೇಸದವನುಂ, ಇಂದ್ರಜಾಲಂ ಮೊದಲಾದ ಕಪಟವಿದ್ಯೆಯಿಂ ಬರ್ದುಂಕುವವನುಂ ಇದಱೊಳ್ ಬೀೞ್ವರ್. ಇಂತಿವು ಮೊದಲಾದ ಪಲವುಂ ತೆಱದ ಪಾತಕಂಗಳನೆಸಗಿದವರ್ ಬೀೞ್ವ ನರಕಂಗಳ್ ಪಲವುಂ ತೆಱನಾಗಿ ಮಿತಿಯಿಲ್ಲದಿರ್ಪುವು. ನಿನ್ನ ದಿವ್ಯಸಂಕೀರ್ತನದಿಂದಮೆ ಸಕಲನರಕಭಯಮುಂ ಪರಿಹಾರಮಪ್ಪುದಱಿಂ ನಿನಗೆ ನರಕಾನ್ತಕನೆಂಬ ಪೆಸರಾಗಿರ್ಕುಂ. ಇಂತಿರ್ಪ ನಿನ್ನನೆ ನೆರೆನಂಬಿದೆನೆನ್ನ ಭಯಮಂ ಪರಿಹರಿಸಿ, ನಿನ್ನಡಿಯೂೞಿಗಮನಿತ್ತು ಮನ್ನಿಪುದು ಮನ್ನಿಪುದನನ್ಯಜನಸುಲಭ, ಶ್ರೀ ಯ ದು ಶೈ ಲ ವಲ್ಲಭಾ !



## ॥ ಪದಿನೆಂಟನೆಯ ಬಿನ್ನಪಂ ॥

ಉದ್ಧತ ಪಾಪಿಗಳುಂ ಪರಿ ।
ಶುದ್ಧರ್ ನಿನ್ನಡಿಯ ನೆನೆದ ಮಾತ್ರದೊಳೆಂದಾ ॥
ಸಿದ್ಧಗರುಡಧ್ವಜಾಙ್ಕಂ ।
ಸಿದ್ಧಾರ್ಚಿತ ಪದಯುಗಂಗೆ ಬಿನ್ನತಿಗೆಯ್ದಂ ॥ ॥ ೩೩ ॥

ಪರಮಪಾವನಾ! ಪಾಪಂಗಳೆಂಬುವು ಕಾಯಿಕಂಗಳೆಂದುಂ, ವಾಚಿಕಂಗಳೆಂದುಂ, ಮಾನಸಿಕಂಗಳೆಂದುಂ ಮೂಱುಂ ತೆಱನಾಗಿರ್ಕುಂ. ಪೊಲ್ಲದ ವಸ್ತುಗಳಂ ತಿಂಬುದುಂ, ಪೊಲ್ಲದರ ಮನೆಯೊಳುಣ್ಬುದುಂ, ಪೊಲ್ಲದವರ್ಗೆ ಯಜ್ಞಾದಿ ಕ್ರಿಯೆಗಳಂ ಮಾಡಿಪುದುಂ, ಪೊಲ್ಲದವರಿಂ ದಾನಮಂ ಕೊಳ್ವುದುಂ, ಪರರ ಪೆಂಡಿರ್ಗಳುಪ್ಪುವುದುಂ, ಪೊಲ್ಲದವರನೋಲಗಿಪುದುಂ, ಪರರೊಡವೆಯನಪಹರಿಪುದುಂ, ಪ್ರಾಣಿಹಿಂಸೆಗೆಯ್ವುದುಂ ಮೊದಲಾದುವು ಕಾಯಿಕಮಾದ ಪಾಪಂಗಳೆನಿಪ್ಪುವು. ನಿಷ್ಠುರೋಕ್ತಿಗಳನಾಡುವುದುಂ, ಪುಸಿವಾತನಾಡುವುದುಂ, ಚಾಡಿಯ ಪೇೞ್ವುದುಂ, ಇಹಪರ ಪ್ರಯೋಜನಮಿಲ್ಲದ ಬಱಿವಾತಿನೊಳ್ ಪ್ರೊೞ್ತುಗಳೆವುದುಂ, ವಿವಾದಂಗೆಯ್ವುದುಂ, ವೇದಮುಮಂ ಕೂಲಿಗೋದಿಪ್ಪುದುಂ, ಪರನಿನ್ದೆಗೆಯ್ವುದುಂ ಮೊದಲಾದುವು ವಾಚಿಕಪಾಪಂಗಳೆನಿಪ್ಪುವು. ಪರರ್ಗೆ ದ್ರೋಹಮನೆಣಿಪುದುಂ, ಸಲ್ಲದಾಸೆಯುಂ, ಸಲ್ಲದ ಕೋಪಮುಂ, ಲೋಭಮುಂ, ಅಜ್ಞಾನಮುಂ, ಕೊಬ್ಬುಂ, ಕೇಣಸರಮುಂ, ಮೊದಲಾದುವು ಮಾನಸಿಕಪಾಪಂಗಳೆನಿಪ್ಪುವು. ಈ ಪ್ರಕಾರದ ಪಾಪಂಗಳಂ ಮಾಡಿದವರ್ ಆವಾವ ಪಾಂಗಿನ ಶರೀರದೊಳ್ಆವಾವ ತೆಱದೊಳ್ ಪಾಪಂಗಳನೆಸಗಿದರ್, ಮರಣಾನ್ತಮೊಳದೇ ಪ್ರಕಾರದ ಯಾತನಾಶರೀರಮಂ ಪರಿಗ್ರಹಿಸುವರ್. ಯಾತನಾಶರೀರಮೆಂಬುದು ಕೊಯ್ದೊಡಂ, ಕೊಱೆದೊಡಂ, ಸೀೞ್ದೊಡಂ ಸುಟ್ಟೊಡಂ ಅೞಿದು ಪೋಗದೆ ಮುಟ್ಟಿದೊಡೆ ಕಂದುವಂತೆ ಮೆಲ್ಲಿತ್ತಾಗಿ ಮಿತಿಯಿಲ್ಲದ ವೇದನೆಯನನುಭವಿಸುತಿರ್ಪುದು ಇಂತಿರ್ಪ ಶರೀರದೊಳ್ ಪಾಪಿಗಳಂ ಯಾತನೆಬಡಿಸುವ ಕ್ರಮವೆಂತೆನೆ: ಈ ಪಾಪಿಯಂ

ನಿಲ್ಲಿಸಿ ಗರಗಸದಿಂ ಕೊಯ್ವುದುಂ, ಜಾಟಿಯೊಳ್ ಕುತ್ತುವುದುಂ, ಜ್ವಾಲಾ
ನಲದೊಳ್ ಪೊರಳಿಪುದುಂ, ಸಿಂಬೆವುಳುಗಳ ಮಡುವಿನೊಳ್ ಮುಳುಂ
ಗಿಪುದುಂ, ಕಾಯ್ದೆಣ್ಣೆ ಕೊಪ್ಪರಿಗೆಯೊಳ್ ಕುದಿಯಿಪುದುಂ, ತಳಸಿದ
ಕೊಡಲಿಯೊಳ್ ಸಂದುಸಂದುಗಳಂ ಕತ್ತರಿಪುದುಂ, ಪದ್ದು ಕಾಗೆ ಗೂಗೆ
ನಾಯ್ನರಿಗಳ್ಗಂ, ಭೂತಪ್ರೇತಪಿಶಾಚಕಂಗಳ್ಗಂ ಕರುಳ್ ನೆತ್ತರ್ ಕಂ
ಡಂಗಳಂ ಪಚ್ಚುಗುಡುವುದುಂ, ಸಾಣೆವಿಡಿದ ಶಸ್ತ್ರದಂತಿರ್ಪಲಗಳಿಂದೆ
ಸವೆಲೆಗಳ್ಳಿಯು ಕಾಡೆಂಬ ಅಸಿಪತ್ರವನದೊಳ್ ಅತ್ತಣಿಂದಿತ್ತಣ್ಗೋಡಿಸಿ
ಇತ್ತಣಿಂದತ್ತಣ್ಗೋಡಿಸಿ ಮೆಯ್ಯ ಕಣ್ಣುಕರುಳ್ಗಳಂ ಕತ್ತರಿಪುದುಂ, ಸವಣೆ
ಯೊಳಿರಿಸಿ ಬೀಸಿಬೀಸಿಪುವುದುಂ, ಉದ್ದವಾದ ಬೆಟ್ಟದ ಕೊನೆಯ ಕೋ
ಡುಂಗಲ್ಗಳ ಮೇಲೆ ತುಳ್ಳಿರಿಸಿ ಜರಿಗೆ ತಲೆಕೆಳಗುಮಾಡಿ ನೂಂಕುವುದುಂ,
ಕಾಯ್ದ ಕಾವಲಿಯ ಮೇಲೆ ಪೊರಳಿಪುದುಂ, ಮೆಯ್ಯೆಲ್ಲಮಂ ಪಿರಿದು
ಕಿರುದಾಗಿ ಕತ್ತರಿಪುದುಂ, ಕತ್ತರಿಸಿದ ತುಂಡುಗಳಂ ಗುಂಬದೊಳ್
ತುಂಬಿ ಕುದಿಯಿಸುವುದುಂ—ಇವು ಮೊದಲಾದ ಯಾತನೆಗಳಂ ಪಲವುಂ
ಕೋಟಿಯುಗಮನನುಭವಿಸಿ, ಮಗುೞ್ದು ಭೂಮಿಯೊಳ್ ಪುಟ್ಟುವಾಗಳುಂ
ಮಾನಸಿಕಪಾಪಂಗಳನೆಸಗಿದವರ್ ಪಕ್ಷಿಮೃಗಂಗಳಾಗಿಯುಂ, ಕಾಯಿಕ
ಪಾಪಂಗಳನೆಸಗಿದವರ್ ಪುಲ್ಗಿಡುಮರಂಗಳಾಗಿಯುಂ ಪುಟ್ಟುವರ್. ಈ
ಪಾಪಿಗಳೊಳಂ ಬ್ರಹ್ಮಹತ್ಯೆಗೆಯ್ದವರ್ ಶ್ವಾನಸೂಕರಖರೋಷ್ಟ್ರಯೋನಿಗ
ಳೊಳಂ ಆಡು ಕುರಿ ಪುಲ್ಲೆ ಪಕ್ಕಿಗಳೊಳಂ ಚಾಂಡಾಲಯೋನಿಗಳೊಳಂ
ಪಲವುಂ ಬಾರಿ ಪುಟ್ಟುತಿರ್ಪರ್. ಸುರಾಪಾನವಂ ಮಾಡಿದ ಪಾಪರ್ ಕ್ರಿ
ಮಿಕೀಟಪತಂಗಯೋನಿಗಳೊಳಂ ಅಮೇಧ್ಯಭಕ್ಷಕಂಗಳಾದ ಶ್ವಾನಸೂಕರಾ
ದಿಗಳೊಳಂ, ಹಿಂಸಕಂಗಳಾದ ಪುಲಿಕರಡಿ ಮುಂತಾದುವಱೊಳಂ, ಅಸ್ಪೃ
ಶ್ಯಂಗಳಾದ ಕಾಗೆ ಗೂಗೆ ಮೊದಲಾದುವಱೊಳುಂ, ಅನ್ತ್ಯ ಜಾತಿಯೊಳಂ
ಪಲಮರ್ಮೆ ಪುಟ್ಟುತಿರ್ಪರ್. ಸುವರ್ಣಸ್ತೇಯಮಂ ಮಾಡಿದವರ್ ಪಾವು
ಪಲ್ಲಿಗಳೊಳಂ, ನೀರ ಕಾಗೆ ಕೋೞಿ ಮೊದಲಾದ ಜಲಚರಪಕ್ಷಿಗಳೊಳಂ,
ಭೂತಪ್ರೇತ ಪಿಶಾಚ ಬ್ರಹ್ಮರಾಕ್ಷಸ ಜಾತಿಯೊಳಂ ಪುಟ್ಟುತಿರ್ಪರ್. ಗು
ರುತಲ್ಪಗಮನಮನೆಸಗಿದವರ್ ಪುಲ್ ಪೊದರ್ಗಳಾಗಿಯುಂ, ಪೆಣ
ದಿನಿಗಳಾದ ನಾಯ್ನರಿಗಳಾಗಿಯುಂ, ಕ್ರೂರಕರ್ಮರತರಾದ ಮನುಷ್ಯ

ರಾಗಿಯುಂ ಪುಟ್ಟುತಿರ್ಪರ್. ಈ ಮಹಾಪಾತಕಿಗಳೊಡನಾಡುವ ತತ್ಸಂಯೋಗವೆಂಬ ಪಾತಕಮನೆಸಗಿದವರ್ ಬ್ರಹ್ಮರಾಕ್ಷಸ ಯೋನಿಯೊಳ್ ಪುಟ್ಟುತಿರ್ಪರ್. ಇಂತಿವು ಮೊದಲಾಗಿ ಪಲವುಂ ತೆಱದ ಪಾಪಂಗಳನೆಸಗಿದವರ್ ಪಲವುಂ ಪಶುಯೋನಿಗಳೊಳ್ ಪುಟ್ಟುತಿರ್ಪರ್. ಈ ಪಾತಕಿಗಳ್ ತಮ್ಮ ಪಾತಕಂಗಳನಿತರ್ಕಂ ಬೇಱೆ ಬೇಱೆ ಪ್ರಾಯಶ್ಚಿತ್ತಮನೆಸಗುವುದು ಜನ್ಮಕೋಟಿಯೊಳಂ ತೀರದು. ದಯಾಳುವಾದ ನಿನ್ನ ಕಟಾಕ್ಷದಿಂ ಮನದೊಳ್ ವಿವೇಕಂ ಪುಟ್ಟಿ, ಪಿಂತಣಪಾಪಕ್ಕೆ ಪಶ್ಚಾತ್ತಾಪಮುಂಟಾಗಿ ಯಥಾಶಕ್ತಿ ಪ್ರಾಯಶ್ಚಿತ್ತಮನಾಚರಿಸಿ, ನೀನಾಳ್ದನುಂ ತಾನಾಳುಮೆಂಬೆಣಿಕೆಗೂಡಿ, ನಿನ್ನನೇ ನೆನೆಯುತಿರ್ಪುದೆಂಬ ಕೃಷ್ಣಾನುಸ್ಮರಣಮೊಂದೆಱಂದಮೆ ಸಕಲಪಾಪಂಗಳುಂ ಸವಾಸನಮಾಗಿ ಪೋಪುದೆಂಬ ಶಾಸ್ತ್ರಾರ್ಥತತ್ತ್ವಮುಂ ತಿಳಿಯೆ, ನೀನೇ ಪರಮಪಾವನನೆನಿಸುವೈ. ಅದಱಿಂ ನೀನೆನ್ನ ಪಾಪಂಗಳಂ ಪಿರಿದೆನಿಸದೆ ನಿನ್ನ ಪಾವನತ್ವಮುಂ ಮೆಱೆದೆನ್ನಂ ಪೊರೆವುದು ಪೊರೆವುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ!



## ॥ ಪತ್ತೊಂಬತ್ತನೆಯ ಬಿನ್ನಪಂ ॥

ಶ್ರೀಪತಿ ಲೋಕಕರ್ತೃ ನಿಗಮಸ್ತುತನದ್ಭುತವೈಭವಂ ಜಗ ।
ದ್ವ್ಯಾಪನಸಾಧ್ಯಸಾಧಕನಶೇಷಸಮಂ ಪರತತ್ತ್ವನುಂ ಪೃಥ ॥
ಗ್ವಿಧವಿಚಿತ್ರ ಕರ್ಮಫಲದಾಯಕನೆಂದು ಮಹೀಮಹೇಂದ್ರನೊ ।
ಲ್ಲೀಪರಿ ದೈತ್ಯವೈರಿಗೊರೆದಂ ಪದಿನೆಂಟುಮುದಾರಗದ್ಯದೊಳ್ ॥ ೩೪ ॥

ಪದಿನಾಲ್ಕುಂ ಲೋಕಮುಂ ಭಾವಿಸೆಯಸುಖಮನಿತ್ಯಂ ಪರಬ್ರಹ್ಮಮೊಂದೇ
ವಿದಿತಂ ನಿತ್ಯಾಮಿತಾನಂದಮಯಮೆನಿಪ ಘಂಟಾರ್ಥಮಂ ಭಾವಿಸಲ್ಕೇ ॥
ಪದದೊಳ್ ವೈರಾಗ್ಯಮುಂ ಮೋಕ್ಷಮೊಳಿಡಕಮುಮಕ್ಕುಂ ಬುಧರ್ಗೆಂದು ಮಿಕ್ಕಂ ।
ಮುದದೊಳ್ ಪ್ರಾಜ್ಞಪ್ರತಾಪಂ ಸನಕಮುನಿಸಮಾರಾಧಿತಂಗೊಲ್ದು ಪೇಳ್ದಂ ॥ ॥ ೩೫ ॥

ಮುಕ್ತಿಯೊಳಾಸೆಯುಮಿಂತರವಿ ।
ರಕ್ತಿಯುಮನುಗೂಡಿದವರ್ಗೆ ಮೋಕ್ಷೋಪಾಯಂ ॥
ಯುಕ್ತಮೆನೆ ಪೇಳ್ದನನಿತರ ।
ಭಕ್ತಕುಟುಂಬಂಗೆ ಮಣಿದು ಚಿಕದೇವೇಂದ್ರಂ ॥ ॥ ೩೬ ॥

ಈರಾಱುಂ ಗದ್ಯದೊಳಿ ।
ನ್ನೋರನ್ತೆಯ ಮುಕ್ತ್ಯುಪಾಯಮಂ ಮೋಕ್ಷಮುಮಂ ॥
ಸೂರಿಸಮಾಜಂ ಸೈಯೆನೆ ।
ನಾರಾಯಣನಡಿಗಳಭೇದ್ಯವಿಕ್ರಮನುಸಿರ್ದಂ ॥ ॥ ೩೭ ॥

ಮೋಕ್ಷದಾನೈಕದೀಕ್ಷಿತಾ! ಲೋಗರ್ ಬಯಸುವ ಪುರುಷಾರ್ಥಂ
ಗಳೊಳರ್ಥಕಾಮಾದಿಗಳಸ್ಥಿರಂಗಳುಮಲ್ಪಸುಖಂಗಳುಮೆಂದು ಅವಂ
ಜಱೆದು, ನಿತ್ಯಮುಂ ನಿರವಧಿಕಾನನ್ದಮುಮಪ್ಪುದಱಿಂ ಮೋಕ್ಷಮೊನ್ದನೆ
ಪೊಗೞ್ದು, ಇದಂ ಸಾಧಿಸಲ್ಕೆ ಕರ್ಮಜ್ಞಾನಭಕ್ತ್ಯಾದಿಗಳುಪಾಯಂಗಳೆಂದುಂ
ವೇದಾಂತಂಗಳಿಂ ತಿಳಿಪಿದ್ಪೈ. ಈ ತತ್ತ್ವಾರ್ಥಮಂ ಪಿರಿಯರುಪದೇಶದಿಂ
ಪೆಱತು ವಿಚಾರಿಸೆ, ಕರ್ಮಯೋಗಮೆಂಬುದು—ಅಱಿವುಮಾರ್ಪುಂ ಪುರು
ಕಿಲ್ಲದೆಮಗೆ ನೀನಿವೆಲ್ಲಮನಿತ್ತು ನೀನಿತ್ತ ಸಾಮಗ್ರಿಯಿಂ ನಿನ್ನೊಱಗ

ಮುಪ್ಪ ನಿತ್ಯಕರ್ಮಂಗಳನೆಮ್ಮ ಕೈಯ್ಯೊಳ್ ನೀನೇ ಮಾಡಿಸುವುದಱಿಂ ವರ್ಣಾಶ್ರಮಧರ್ಮಂಗಳ ನಾಮೆಸಗುವೆವೆಂಬ ಕರ್ತೃತ್ವಕ್ಕಂ ಈ ಕರ್ಮದಿಂದೆ ಈ ಫಲಮಂ ಪಡೆವೆವೆಂಬ ಕಾಮನೆಗಂ ಕಾರಣಮಿಲ್ಲೆಂದು ತಿಳಿದು ಈ ನೆನಪುಗೂಡಿ ವರ್ಣಾಶ್ರಮಧರ್ಮಂಗಳನೆಸಗುವ ಜಾಣ್ಮೆ. ಜ್ಞಾನಯೋಗಮೆಂಬುದು—ಈ ಕರ್ಮಯೋಗದಿಂ ಪಿಂತಣ ಸಕಲ ಪಾಪಂಗಳೆಂಬ ಕಲ್ಮಷಮಂ ಕಳೆದು ನಿರ್ಮಲಮೆನಿಪಂತಃಕರಣದೊಳ್ ಶಾಸ್ತ್ರೋಕ್ತಕ್ರಮದಿಂದಿರ್ಪತ್ತುನಾಲ್ಕುಂ ತತ್ತ್ವಂಗಳ ನೆಲೆಯುಂ ತಿಳಿದು ಇವೆಲ್ಲಕ್ಕಂ ಅಧಿಕಮೆನಿಪ ಜೀವಾತ್ಮ ಪರಮಾತ್ಮ ಸ್ವರೂಪಮಂ ಸಾಕ್ಷಾತ್ಕರಿಸಿದಂತೆ ಅಱಪ ತಿಳಿವು. ಭಕ್ತಿಯೋಗಮೆಂಬುದು—ಜೀವಪರಮರ ನೆಲೆಯುಂ ತಿಳಿದು ನಿತ್ಯಮೆನಿಪ ವರ್ಣಾಶ್ರಮ ಧರ್ಮಂಗಳನಾಚರಿಸುತ್ತೆ ವೇದಾಂತವಿಹಿತ ಕ್ರಮದೊಳ್ ಪ್ರೀತಿರೂಪಮಾಗಿ ನಿನ್ನಡಿಗಳನೆಡೆವಿಡದೆ ನೆನೆವ ನಿಧಿಧ್ಯಾಸನಂ. ಇವಱ ನೆಲೆಯುಂ ವಿಚಾರಿಪೆ, ಕರ್ಮಯೋಗಂ ಮನಸ್ಸಿಂಗೆ ಪರಿಶುದ್ಧಿಯನೆಸಗುತ್ತೆ ಜ್ಞಾನಯೋಗಮನುಣ್ಮುವಮಾಡಿ ಭಕ್ತಿಯೋಗಕ್ಕಂಗಮಾಗಿರ್ಪುದಲ್ಲದೆ ಸ್ವಾತಂತ್ರ್ಯದಿಂ ಮೋಕ್ಷಸಾಧನಮಲ್ತು; ಜ್ಞಾನಯೋಗಮುಂ ಭಕ್ತಿಗೆಯ್ದ ಜೀವಾತ್ಮಸ್ವರೂಪಮಂ ಭಕ್ತಿಗೆ ವಿಷಯಮಪ್ಪ ನಿನ್ನ ಸ್ವರೂಪಮಂ ತಿಳಿಪಿ ಭಕ್ತಿಯೋಗಮಂ ಬಳೆಯಿಪುದಲ್ಲದೆ ಸ್ವಾತಂತ್ರ್ಯದಿಂ ಮೋಕ್ಷಸಾಧನಮಲ್ತು; ಭಕ್ತಿಯೋಗಮುಂ ಆಳ್ದನಪ್ಪ ನಿನ್ನಡಿಯೊಳ್ ಆಳೆನಿಸಿದ ಆಮೆಸಗುವ ಪ್ರೀತಿ, ಲೋಕದೊಳ್ ಆಳ್ದಂಗೆ ಆಳಳೊಳ್ ಪುಟ್ಟಿದ ಪ್ರೀತಿಯೇ ಕಾರ್ಯಕರಮಲ್ಲದೆ ಆಳೆನಿಸಿದವರ್ಗೆ ಆಳ್ದನೊಳುಂಟಾದ ಪ್ರೀತಿಮಾತ್ರಮೇ ಕಾರ್ಯಕರಮೆಲ್ತೆಂಬುದಱಿಂ ಭಕ್ತಿಯುಂ ಸಾಕ್ಷಾನ್ಮೋಕ್ಷಸಾಧನಮಲ್ತು. ನಿನ್ನ ಪ್ರೀತಿಯೊಂದೇ ಮೋಕ್ಷಸಾಧನಮಪ್ಪುದಱಿಂ ನಿನ್ನ ದಯಾಮೃತದೊಳ್ ಪುಟ್ಟಿ ಬಳೆದ ಪರಾಂಕುಶ ಪರಕಾಲ ಯತಿವರಾದಿಗಳ್ ಪಿಡಿದು ಲಕ್ಷ್ಮಣಾಚಾರ್ಯ ಪರ್ಯಂತಮಾದ ಪಿರಿಯರುಂ ಕುಱಿತೆನ್ನೊಳ್ ದಯೆಗೆಯ್ವುದು ದಯೆಗೆಯ್ವುದು ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಇರ್ಪತ್ತೆನೆಯ ಬಿನ್ನಪಂ ॥

ಸಾತ್ವಿಕಶಾಸ್ತ್ರಂಗಳೊಳೇ ।
ತತ್ವಂ ನಿರ್ಣೀತಮಕ್ಕುಮೆಂದಾದರದಿಂ ॥
ಸಾತ್ವನಿಧಿಯಡಿಗೆ ವೈಷ್ಣವ ।
ತತ್ವೋದ್ಧರಣಪ್ರವೀಣನೊಳ್ಪಿಂದೊರೆದಂ ॥ ॥ ೩೮ ॥

ಸತ್ವಪ್ರವರ್ತಕಾ! ವೇದಾನ್ತಾರ್ಥಮಂ ನಿಶ್ಚಯಿಸುವೆಡೆಯೊಳ್ ಇತಿಹಾಸಪುರಾಣಗಳಿಂದಂ ನಿಶ್ಚಯಿಸವೇಳ್ಪುದು. ಅವಱೊಳ್ ಶ್ರೀ ರಾಮಾಯಣಂ ಭಾರತಂ ಮೊದಲಾದ ಇತಿಹಾಸಂಗಳ್ ನಿನ್ನ ಮಹಿಮೆಯನೆ ಪೇೞ್ದುದಱಿಂ ಸಾತ್ವಿಕಂಗಳಾಗಿ ಸರ್ವಾಂಶದೊಳಂ ಪ್ರಮಾಣಂಗಳಾಗಿರ್ಪುವು. ಪುರಾಣಂಗಳನಿತುಂ ಚತುರ್ಮುಖಂ ಪವಣ್ಗೆಯ್ದುದಱಿಂ ಆ ಚತುರ್ಮುಖಂಗೆ ಆವದಿವಸದೊಳಾವಗುಣಂ ಪೆರ್ಚಿರ್ಪುದು, ಆ ದಿನದೊಳ್ ಪೇೞ್ದ ಪುರಾಣಂ ಆ ಗುಣಮಾಗಿರ್ಪುದು. ಅದೆಂತೆನೆ:— ನಾಲ್ಮೊಗನ ದಿನಕ್ಕೆ ಕಲ್ಪಮೆಂದು ಪೆಸರ್. ನಾಲ್ಮೊಗನುಂ ಪ್ರಕೃತಿಯೊಳ್ ಸಿಲ್ಕಿದವನಾದಕಾರಣಂ ಆತಂಗಂ ಸತ್ವರಜಸ್ತಮೋಗುಣಂಗಳೊಳವು. ಆವ ಕಲ್ಪಂಗಳೊಳ್ ಸತ್ವಗುಣಂ ಪ್ರಬಲಗುಣಮಾಗಿರ್ಕುಂ, ಆ ದಿವಸಂಗಳೊಳ್ ಪೇೞ್ದ ಪುರಾಣಂಗಳ್ ಸಾತ್ವಿಕಂಗಳೆನಿಸಿ ನಿನ್ನ ಮಹಿಮೆಯುಂ ಪೊಗೞ್ದು ಮೋಕ್ಷಸಾಧನಮಾಗಿರ್ಕುಂ. ಮತ್ತಂ ಆವ ದಿವಸಂಗಳೊಳ್ ರಜೋಗುಣಂ ಪ್ರಬಲಮಾಗಿರ್ಕುಂ ಆ ದಿವಸದೊಳ್ ಪೇೞ್ದ ಪುರಾಣಂಗಳ್ ರಾಜಸಂಗಳೆನಿಸಿ ನಾಲ್ಮೊಗನ ಪೆರ್ಮೆಯುಂ ಪೇೞ್ದು ಸ್ವರ್ಗೈಶ್ವರ್ಯಾದಿ ಮಧ್ಯಮಫಲಸಾಧನಮಾಗಿರ್ಕುಂ. ಮತ್ತಂ ಆವ ದಿವಸಂಗಳೊಳ್ ತಮೋಗುಣಂ ಪ್ರಬಲಮಾಗಿರ್ಕುಂ ಆ ದಿವಸಂಗಳೊಳ್ ಪೇೞ್ದ ಪುರಾಣಂಗಳ್ ತಾಮಸಂಗಳೆನಿಸಿ ರುದ್ರನ ಪೆರ್ಚುಗೆಯುಂ ನುಡಿದು ಅಧೋಗತಿಸಾಧನಮಾಗಿರ್ಕುಂ. ಆದುದಱಿಂ ನಾಲ್ಮೊಗಂ ಸತ್ವೋದ್ರಿಕ್ತದಿವಸಂಗಳೊಳ್ ಪೇೞ್ದ ಸಾತ್ವಿಕಪುರಾಣಂಗಳ್ ಮುಖ್ಯಪ್ರಮಾಣಮಾಗಿರ್ಕುಂ. ಮಿಕ್ಕ ರಾಜಸತಾಮಸಪುರಾಣಂಗಳೊಳ್ ಸಾತ್ವಿಕ ಪುರಾಣಕ್ಕೆ

ವಿರುದ್ಧವಲ್ಲದಂಶಮೆಲ್ಲಮುಂ ಪ್ರಮಾಣಮಾಗಿರ್ಕುಂ. ವಿರುದ್ಧಮಾಗಿರ್ಪಂಶಂ ಸ್ವಾರ್ಥದೊಳಪ್ರಮಾಣಮಾಗಿ ಪ್ರಶಂಸಾದಿಪರಮಾಗಿರ್ಕುಂ. ಈ ಮರ್ಯ್ಯಾದೆಯನಱಿಯದೆ ರಾಜಸ ತಾಮಸ ಪುರಾಣಂಗಳೊಳ್ ಪೇೞುದೆಲ್ಲಮುಂ ಪ್ರಮಾಣಮೆಂದು ನಂಬಿ ನಡೆವರ್ಗೆ ಮಧ್ಯಮಗತಿಯುಮಧೋಗತಿಯುಮಪ್ಪುದೆಂದು ಮತ್ಸ್ಯಪುರಾಣದೊಳ್ ಪೇೞ್ದುದು ; ಶ್ರೀಭಗವದ್ಗೀತೆಯೊಳ್ ನೀನುಂ ಪೇೞ್ದೆಲ್ತೆ. ಇದಱ ನೆಲೆಯುಂ ವಿಚಾರಿಸೆ ಪರಮಪುರುಷಾರ್ಥಮಾದ ಮೋಕ್ಷಮೆಂಬುದು ಅರ್ಥಪಂಚಕತತ್ತ್ವಜ್ಞಾನಮಿಲ್ಲದೆ ಕೂಡದು ; ಆ ತತ್ತ್ವಜ್ಞಾನಂ ಸಾತ್ವಿಕಶಾಸ್ತ್ರಪ್ರವೇಶಮಿಲ್ಲದೆ ಕೂಡದು ; ಆ ಸತ್ವಗುಣಂ ನಿನ್ನ ಜಾಯಮಾನಕಟಾಕ್ಷಮಿಲ್ಲದೆ ಕೂಡದು. ಅದಱಿಂ ನಿನ್ನ ಜಾಯಮಾನಕಟಾಕ್ಷಮಂ ಪಡೆದು ಸಾತ್ವಿಕರಾಗಿ ಸಾತ್ವಿಕಪುರಾಣಾನುಗುಣಮಾಗಿ ವೇದಾನ್ತಾರ್ಥನಿಶ್ಚಯಂಗೆಯ್ವ ಮಹಾತ್ಮರಂ ನೆರೆನಂಬುವ ಸತ್ವಗುಣಮನೆನಗೆ ಪಾಲಿಪುದು ಪಾಲಿಪ್ರದನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಇರ್ಪತ್ತೊಂದನೆಯ ಬಿನ್ನಪಂ ॥

ಯೋಗಂ ಸಾಂಖ್ಯಂ ಪಾಶುಪ ।
ತಾಗಮುಮಿನಿತರ್ಕೆ ಪಾಂಚರಾತ್ರಂ ಪಿರಿದೆಂ ॥
ದಾಗೋವಿಂದನೊಳುಸಿರ್ದಂ ।
ರಾಗದೆ ದುರ್ಮತವಿಮರ್ದನದ್ಭುತಚರಿತಂ ॥ ॥ ೨೯ ॥

ಸರ್ವತಂತ್ರಸ್ವತಂತ್ರಾ ! ತಂತ್ರಂಗಳೆಂಬುವು—ಸಾಂಖ್ಯಮುಂ, ಯೋಗಮುಂ, ಪಾಶುಪತಮುಂ, ಶ್ರೀ ಪಾಂಚರಾತ್ರಮೆಂಬಿವು. ಇವರ್ಕೆ ಸಿದ್ಧಾನ್ತಂಗಳೆಂದುಂ, ಆಗಮಂಗಳೆಂದುಂ, ಪೆಸರಾಗಿರ್ಕುಂ. ಇವಱೊಳ್ ಸಾಂಖ್ಯತಂತ್ರಮೆಂಬುದು ಈ ಪಂಚವಿಂಶತಿತತ್ತ್ವಂಗಳ ಸ್ವರೂಪಮುಂ ನಿರೂಪಿಸಲ್ಕಾಗಿ ಪುಟ್ಟಿರ್ಪುದಱಿಂ, ತತ್ತ್ವನಿರೂಪಣಂಗೆಯ್ವಂಶದೊಳ್ ಪ್ರಮಾಣಮಾಗಿರ್ಕುಂ. ಈ ತತ್ತ್ವನಿರೂಪಣದೊಳೆಲ್ಲರುಂ ಪ್ರೀತಿಯಿಂ ಪ್ರವರ್ತಿಸವೇಳ್ಪುದೆಂದು ಈ ಪಂಚವಿಂಶತಿತತ್ತ್ವಂಗಳಂ ಕೊಣ್ಡಾಡುವ ಕೊಣ್ಡಾಟಂ ಮಿಕ್ಕಿಮೀಱಿ ಈ ತತ್ತ್ವಂಗಳಿಂದಮೇ ಜಗಂ ಪುಟ್ಟುವುದು, ಬೇಱೆ ಇರ್ಪತ್ತಾಱನೆಯ ತತ್ತ್ವಮಾದ ಈಶ್ವರನಂ ಕಂಡವರಾರ್ ? ಎಂದಿವು ಮುಂತಾಗಿ ವೇದವಿರುದ್ಧಂಗಳಾಗಿ ಕೆಲವು ವಚನಂಗಳಿರ್ಪುವು. ಆಯಂಶಂ ಸ್ತುತಿರೂಪಮಲ್ಲದೆ ಪ್ರಮಾಣಮಲ್ತು. ಯೋಗತಂತ್ರಮೆಂಬುದು—ಯಮನಿಯಮಾದಿ ಯೋಗಾಂಗಳಂ ನಿರೂಪಿಸಲ್ಕಾಗಿ ಪುಟ್ಟಿರ್ಪುದಱಿಂ ಯೋಗನಿರೂಪಣಂಗೆಯ್ವ ಅಂಶದೊಳ್ ಪ್ರಮಾಣಮಾಗಿರ್ಕುಂ. ಈಯೋಗನಿರೂಪಣದೊಳೆಲ್ಲರುಂ ಪ್ರೀತಿಯಿಂ ಪ್ರವರ್ತಿಸಲ್ಕಾಗಿ ಜಗದೀಶ್ವರಂಗಂ ಈಯೋಗಪ್ರಭಾವದಿಂದಮೇ ಜಗದೀಶ್ವರತ್ವಮುಣ್ಟಾಯಿತೆಂಬಿವು ಮುಂತಾಗಿ ವೇದವಿರುದ್ಧಂಗಳಾಗಿ ಕೆಲವು ವಚನಂಗಳಿರ್ಕುಂ. ಆಯಂಶದೊಳ್ ಸ್ತುತಿರೂಪಮಲ್ಲದೆ ಪ್ರಮಾಣಮಲ್ತು. ಪಾಶುಪತಮೆಂಬುದು—ಧರ್ಮಾರ್ಥಕಾಮಂಗಳೆಂಬ ತ್ರಿವರ್ಗಫಲಸಾಧನಮಾದ ದೇವತಾನ್ತರೋಪಾಸನಪ್ರಕಾರಮಂ ನಿರೂಪಿಸಲ್ಕಾಗಿ ಪುಟ್ಟಿರ್ಪುದಱಿಂದಾದೇವತೋಪಾಸನಾನಿರೂಪಣಂಗೆಯ್ವಂಶದೊಳ್ ಪ್ರಮಾಣಮಾಗಿರ್ಕುಂ. ಈ ದೇವತಾನ್ತರೋ

ಪಾಸನಂಗಳೊಳೆಲ್ಲರುಂ ಪ್ರೀತಿಯಿಂ ಪ್ರವರ್ತಿಸಲ್ಕಾಗಿ ಈ ದೇವತಾಂತರಂಗಳೇ ಪರತತ್ವಮೆಂದಿವು ಮುಂತಾಗಿ ವೇದವಿರುದ್ಧಂಗಳಾಗಿ ಕೆಲವು ವಚನಂಗಳಿರ್ಪುವು. ಆ ಯಂಶದೊಳ್ ಸ್ತುತಿಮಾತ್ರಮೆಯಲ್ಲದೆ ಪ್ರಮಾಣಮಲ್ತು. ಶ್ರೀಪಾಂಚರಾತ್ರಮೆಂಬುದು ವೇದಾನ್ತತಾತ್ಪರ್ಯ ವಿಷಯಮಾದ ಭಗವದುಪಾಸನಾನಿರೂಪಣಾರ್ಥವಾಗಿ ಪುಟ್ಟಿರ್ಪುದರಿಂ ಸರ್ವಾಂಶದೊಳಂ ವೇದಾನ್ತಾನುಗುಣಮಾಗಿ ಪ್ರಮಾಣಮಾಗಿರ್ಪುದು. ಈಯರ್ಥಂ ಮಹಾಭಾರತದ ಶಾನ್ತಿಪರ್ವದೊಳ್ ಸುವ್ಯಕ್ತಮಾಗಿರ್ಪುದು. ಅದೆಂತೆನೆ :— ಮೋಕ್ಷಧರ್ಮದೊಳ್ ನಿಷ್ಠಾ ನಿರ್ಣಯಾಧ್ಯಾಯದೊಳ್ ವೇದಂಗಳುಂ, ಶ್ರೀಪಾಂಚರಾತ್ರಮುಂ, ಸಾಂಖ್ಯಮುಂ, ಯೋಗಮುಂ, ಪಾಶುಪತಮೆಂಬೀ ಪಂಚಸಿದ್ಧಾಂತಂಗಳುಂ ಪರಸ್ಪರ ವಿರುದ್ಧಮಾದ ತತ್ವದ ನೆಲೆಗಳಂ ಪ್ರತಿಪಾದಿಸುವುವೋ? ಎಲ್ಲಮುಂ ಒನ್ದೇ ತತ್ವದ ನೆಲೆಯಂ ಪ್ರತಿಪಾದಿಸುವುವೋ? ಎಂದು ಪ್ರಶ್ನಪೂರ್ವಕವಾಗಿ ವಿಚಾರಿಸಿ, ಪಲವುಂ ದಾರಿಗಳೊಂದೇ ಪಟ್ಟಣಮಂ ಸೇರಿಯೊಂದೇ ನೆಲೆಯಂ ಪಡೆವಂತೆ ವೇದಮುಂ ಶ್ರೀಪಾಂಚರಾತ್ರಮುಂ ಮಿಕ್ಕಿನ ಮೂರುಂ ತಂತ್ರಂಗಳುಂ ನಿನ್ನ ಮಹಿಮೆಯುಂ ಪ್ರತಿಪಾದಿಸಿಯೊಂದೇ ನೆಲೆಯಂ ಪಡೆವುವೆಂದು ನಿರ್ಣಯಮಾಗಿರ್ಪುದು. ಇನ್ತು ತಂತ್ರಂಗಳನಿತುಂ ನಿನ್ನಂ ಪ್ರತಿಪಾದಿಸುತ್ತೆ ನಿನಗೆ ಪರತಂತ್ರಮಾಗಿರ್ಪುದರಿಂ, ನೀಂ ಸರ್ವತಂತ್ರಸ್ವತಂತ್ರನೆನಿಸುವೈ. ಇಂತಿರ್ಪ ನೀನೆ ಎನಗೆ ನಿನ್ನ ನೆಲೆಯಂ ತಿಳುಪುವುದು ತಿಳಿಪುವುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಇರ್ಪತ್ತೆರಡನೆಯ ಬಿನ್ನಪಂ ॥

ಅಱಯೆ ವಿಷಯಾವಳಿಯೊಳ್ ।
ವೈರಾಗ್ಯಂ ಸುಲಭಮೊಳ್ಪನಱಿವರ್ಗೆಂದಾ ॥
ಸೂರವಡೆಸೂಱೆಗಾಱಿಂ ।
ಸಾರಸಭವಸನ್ನುತಂಗೆ ಬಿನ್ನತಿಗೆಯ್ದಂ ॥ ೪೦ ॥

ಅನನ್ಯಜನಸುಲಭಾ ! ಜಗದೊಳ್ ಮನುಜರೊಳ್ ಶಬ್ದಾದಿ ವಿಷಯಂಗಳಂ ಬಿಟ್ಟು ನಿನ್ನನೆ ನೆರೆನಂಬಿದವರ್ಗೆ ನೀಂ ಸುಲಭನೆಂದು ತಿಳಿದ ಮಹಾತ್ಮರ್ ನಿನ್ನಡಿಗಳಂ ಸಾರ್ದು ತಮ್ಮ ಭಾರಮನಿಳುಪಿ ಸುಖದೊಳಿರ್ಪರ್. ಮತ್ತೆ ಕೆಲರ್ ಪಂಡಿತಂಮನ್ಯರ್ ಶರೀರಮುಳ್ಳನ್ನೆವರಂ ವಿಷಯಂಗಳಂ ಬಿಡಕೂಡದುದಱಿಂ ನಿನ್ನ ಭಜನೆ ದುರ್ಘಟಮೆಂಬರ್ ಅವರ್ ಪೇಳ್ವ ಕುಯುಕ್ತಿಗಳ್ ಕೇಳ್ವೊಳವು. ಅದೆಂತೆನೆ:— ವಿಷಯಂಗಳಂ ಪರಿತ್ಯಜಿಸುವುದೆಂಬುದು ಎರಡುತೆಱದಿಂ. ವಿಷಯಂಗಳನಿತುಮಂ ನಾಶಂಗೆಯ್ವುದೊಂದು, ಅಲ್ಲದೊಡೆ ವಿಷಯಂಗಳಿರ್ದೊಡಂ ಅವಂ ಸೋಂಕದಿರ್ಪುದುಮೊಂದು. ಇವಱೊಳ್ ನೀನುಂಟುಮಾಡಿದ ವಿಷಯಂಗಳನಿತುಮಂ ನಾಶಂಗೆಯ್ವೊಡೆ, ನಿನ್ನೊಡವೆಗಳಂ ಕೆಡಿಸಿದ ಸ್ವಾಮಿದ್ರೋಹಂ ಬರ್ಪುದು. ವಿಷಯಂಗಳ ಸೋಂಕಿಲ್ಲದಿರ್ಪೆವೆಂದೊಡೆ ಈ ಪ್ರಕೃತಿಮಂಡಲಮಂ ಬಿಟ್ಟು ಪೋಗದೆಱಿಂದಮೆ ಶಕ್ಯಮಲ್ತು. ಊರೊಳಿರ್ಪ ವನಿತಾದಿವಿಷಯಮಂ ಪಾಣ್ದು ಬನದೊಳಿರ್ದೊಡಂ, ನೀರೊಳ್ ಮುಳುಂಗಿರ್ದೊಡಂ, ಆದಿಭರತನಂತೆಯುಂ ಸೌಭರಿಯಂತೆಯುಂ ಎರಳೆಯ ಕಱು, ಮೀನ್, ಮೊದಲಾದ ವಿಷಯಂಗಳ್ ಸಂಸಾರ ಸಂಬಂಧಮನುಂಟುಮಾಡದೆ ಬಿಡವು. ಆದಱಿಂ ವಿಷಯತ್ಯಾಗ ಮಶಕ್ಯಮೆಂಬರ್. ಇವರೊರ್ಮೆಯುಂ ವೇದಾಂತವಿತ್ತುಗಳಪ್ಪ ಪಿರಿಯರಡಿನೆೞಲೊಳಿರ್ದು ಪೊೞ್ತುಗಳೆದವರಲ್ತು. ಪಿರಿಯರುಪದೇಶದಿಂ ತಿಳಿಯೆ ವಿಷಯಪರಿತ್ಯಾಗ ಮತ್ಯಂತಸುಲಭಮಾಗಿರ್ಪುದು. ಅದೆಂತೆನೆ:— ಆಳೊರ್ವನರಸನನೆಣಿಸದೆ

ಅವನ ಬಂಡಾರಕ್ಕೆ ಸಲುವ ನಾಡು ಬೀಡುಗಳೊಳಿರ್ದೊಡವೆಗಳಂ ತನ್ನೆಗೆಂದು ಗಳಿಸಿ ತನ್ನಿಚ್ಚೆ ಬಂದಂತೆ ಬೀಱುಗೆಯ್ದು ಕಿಡಿಸಿದೊಡೆ, ಅನ್ನೆಗನುಂ ಸ್ವಾಮಿದ್ರೋಹಿಯುಮಕ್ಕುಂ. ಅನ್ತಲ್ಲದೆ ತಾನಾಳೆಂಬ ನೆನಪ್ಪುಗೂಡಿ ಅವನ ಸೇವೆಗೆಂದೊಡವೆಗಳಂ ಸಂಪಾದಿಸಿದುದೆಲ್ಲಮನಂದಂದಿಂಗೊಪ್ಪಿಸಿ, ಅವನಾರೋಗಣೆಗೆಯ್ದುೞಿದ ಅಮೃತಾನ್ನಮನುಣ್ಡು, ಅವನುಟ್ಟು ತೊಟ್ಟು ಕಳೆದಿತ್ತೊಡವೆಯುಡಿಗೆಗಳಂ ಧರಿಸಿ ಸಿರಿವಡೆದು ಮೆಱೆದೊಡಂ ನಿಸ್ಪೃಹನುಂ ವಿಶ್ವಾಸಿಯುಮೆನಿಕ್ಕುಂ. ಅಂತು ನಿನ್ನೊಱಗನೆನಿಸಿದ ತನ್ನ ಸ್ವರೂಪಮಂ ತಿಳಿಯದೆ ತಾಂ ಸ್ವತಂತ್ರನೆಂಬ ಜ್ಞಾನದಿಂ ತನ್ನ ಭೋಗಾರ್ಥವಾಗಿ ವಿಷಯಂಗಳನನುಭವಿಸುವಂಗೆ ವಿಷಯತ್ಯಾಗಮುಂ ನಿನ್ನ ಭಕ್ತಿಯುಂ ಕೂಡದು. ಅಂತಲ್ಲದೆ ತಾಂ ನಿನಗೆ ಆಳೆನಿಪ ನೆನಪ್ಪುಂಟಾಗಿ ವರ್ಣಾಶ್ರಮಧರ್ಮಂಗಳೆನಿಪ ನಿನ್ನೊಱಗಂಗಳೊಳ್ ಶಕ್ತಿವಂಚನೆಯಿಲ್ಲದೆ ನಡೆದು ವೇದಶಾಸ್ತ್ರಂಗಳೆಂಬ ನಿರೂಪಸಹವಾಗಿ ನೀಂ ಕರುಣಿಸಿದ ವಿಷಯಂಗಳನನುಭವಿಸಿದೊಡೆ ಅದುವುಂ ನಿನ್ನೊಱಗಂಗಳಲ್ಲದೆ ವಿಷಯಾಸಕ್ತಿಯಲ್ತು. ಇಂತು ನಡೆದ ವಸಿಷ್ಠವಿಶ್ವಾಮಿತ್ರರ್ ಗೃಹಸ್ಥಾಶ್ರಮದೊಳಿರ್ದುಂ ನಿತ್ಯಬ್ರಹ್ಮಚಾರಿಯುಂ ನಿತ್ಯೋಪವಾಸಿಯುಮೆನಿಸಿದರ್. ಅದಱಿಂ ನೀನವರ್ಗೆ ಸುಲಭನೆನಿಪುದು. ವಿಷಯವಿರಕ್ತಿಯನಿತ್ತು, ನಿನ್ನ ಭಕ್ತಿಯನೆನಗೀವುದು ಎನಗೀವುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

---

## ॥ ಇರ್ಪತ್ತುಮೂಱನೆಯ ಬಿನ್ನಪಂ ॥

ಸಲ್ಲದು ಕೇವಲಕರ್ಮ್ಮಂ ।
ಬಲ್ಲರ ಮತದಿಂದೆ ಮುಕ್ತಿಮಾರ್ಗಕ್ಕೆಂದಾ ॥
ಬಲ್ಲರ ಬಲ್ಲಹನೊಲವಿಂ ।
ಮೆಲ್ಲಡಿಯೊಳ್ ಮಣಿದು ಹರಿಗೆ ಬಿನ್ನತಿಗೆಯ್ದಂ ॥ ೪೧ ॥

ಸಕಲ ಕರ್ಮ್ಮಫಲಪ್ರದಾ ! ಕರ್ಮ್ಮಮೆಂಬುದು ಮಾನಸರೆಸಗುವೆ ಸಕಂ. ಅದು ಸತ್ಕರ್ಮ್ಮಮೆಂದುಂ ದುಷ್ಕರ್ಮ್ಮಮೆಂದುಂ ಎರಳ್ತೆಱಂ. ಸತ್ಕರ್ಮ್ಮಮೆಂಬುದು ನಿನ್ನ ನಿರೂಪಮಾದ ವೇದಶಾಸ್ತ್ರಂಗಳೊಳ್ ಪೊಗೞ್ತೆವೆತ್ತ ನಡತೆ. ದುಷ್ಕರ್ಮ್ಮಮೆಂಬುದು ಅದಱೊಳಲ್ಲಗಳೆದ ನಡತೆ. ಸತ್ಕರ್ಮ್ಮದಿಂ ಪುಣ್ಯಮುಂ ದುಷ್ಕರ್ಮ್ಮದಿಂ ಪಾಪಮುಮಕ್ಕುಂ. ಪುಣ್ಯಮೆಂಬ್ಬುದು ನಿನ್ನೊಲ್ಮೆ, ಪಾಪಮೆಂಬ್ಬುದು ನಿನ್ನ ಮುನಿಸು. ಪುಣ್ಯದಿಂ ಸುಖಮುಂ ಪಾಪದಿಂ ದುಃಖಮುಮಕ್ಕುಂ. ಆಸತ್ಕರ್ಮ್ಮಮುಂ ನಿತ್ಯಮೆನಿಪ್ಪುದುಂ ಕಾಮ್ಯಮೆಂದುಂ ಎರಳ್ತೆಱಂ. ನಿತ್ಯಮೆಂಬುದು ಈ ವರ್ಣದವರ್ ಈ ಆಶ್ರಮದವರ್ ಇದಂ ನಡೆವುದು, ಇದಂ ಬಿಡುವುದು, ಎಂದು ನೀಂ ಸ್ವರುಚಿಯಿಂ ಬಾಣತಿಗೆಯ್ದೆಸಕಂ. ಇದಂ ನಿನ್ನ ಭಕ್ತರ್ ನೀಂ ಸರ್ವಜ್ಞನುಂ ಸರ್ವಶಕ್ತಿಯುಂ ಭಕ್ತವತ್ಸಲನೆಂದುಂ ನಿನ್ನನೆ ನೆರೆನಂಬಿ, ನಿನ್ನ ಗುಣಂಗಳ್ಗೆ ಮಾಱುವೋಗಿ, ನಿನ್ನಾಣತಿವಿಡಿದು, ನಿನ್ನೊಱಿಗಂಗೆಯ್ವುದೇ ಸ್ವಯಂಫಲಮೆಂದು, ಎಸಗಿ ಮೋಕ್ಷಮಂ ಪಡೆವರ್. ಕಾಮ್ಯಮೆಂಬ್ಬುದು ನಿನ್ನ ಮನಂ ಬಾರದಿರ್ದೊಡಂ ಅವರವರಾಸೆವಡುವ ನಿರ್ಬನ್ಧದಿಂ ಈ ಫಲಮನೆಳಸಿದವನೀಕರ್ಮ್ಮಮನೆಸಗುವುದೆಂದು ಉದಾಸೀನ ಬುದ್ಧಿಯಿಂ ನೀಂ ಕಟ್ಟುಮಾಡಿದುದು. ಫಲದಾಸೆಯಿಂದೀಕಾಮ್ಯಕರ್ಮ್ಮಂಗಳಂ ಸಾಂಗಮಾಗಿಯಾಚರಿಸಿದವರ್ಗೆ ಇಹದೊಳ್ ಪೃಥ್ವೀಪತಿತ್ವಪರ್ಯನ್ತಮಾದೈಶ್ವರ್ಯಮುಂ ಪರದೊಳ್ ಸತ್ಯಲೋಕಾಧಿಪತ್ಯಪರ್ಯಂತಮಾದೈಶ್ವರ್ಯಮುಮೆಂಬುದು. ದುಷ್ಕರ್ಮ್ಮಮೆಂಬುದು ನೀಂ ನಿರವಿಸಿದುದಂ ಬಿಡುವುದುಂ, ನೀನಲ್ಲಗಳೆದುದಂ ನಡೆವುದುಮೆಂಬೆರಡು ತೆಱಂ. ಇದಱಿಂದಿಹದೊಳ್ ಚಿತ್ರವಧಾನ್ತಮಾದ

ದುಃಖಮುಮಂ ಪರದೊಳ್ ಮಹಾನರಕಪಾತಾನ್ತಮಾದ ಯಾತನೆಯುಮಾಕ್ಕುಮೆಂದು ವೇದಾನ್ತವಿತ್ತುಗಳಾದ ಪಿರಿಯರಿಂ ಕೇಳ್ದು ತಿಳಿದೆಂ. ಇವಱ ನೆಲೆಯಂ ವಿಚಾರಿಸೆ ಕಾಮ್ಯಕರ್ಮಮುಂ ದುಷ್ಕರ್ಮಮುಂ ನಿನ್ನ ಮನಕ್ಕೆ ಬಾರದಿರ್ದುದಱಿಂ ನಿನ್ನಡಿಯಂ ಸೇರಲೀಸದೆ ಸಂಸಾರಮೆಂಬ ಕೆಱೆಮನೆಯೊಳ್ ಕೆಡಪಿ ಕಾಲ್ತೊಡಕಾಗಿರ್ಪುದಱಿಂ ಪೊನ್ನ ಕಬ್ಬಿಣ್ಣ ಸಂಕಲೆಗಳಂತಿರ್ಪುವು. ಅದಱಿಂದೀಯೆರಡುಂ ತೆಱದ ಬನ್ಧಕ್ಕೆ ಸಿಲ್ಕದೆ ನಿನ್ನನೆ ನೆರೆ ನಂಬಿ ನೀನೊಲ್ದು ನಿರವಿಸಿದುದ್ಯೋಗಮುಂ ಸನ್ತಸದೊಳೆಸಗಿ ನಿನ್ನ ಮೆಚ್ಚುಣೆಯುಂ ಪಡೆವ ಸೈಪನೆನಗೆ ಪಾಲಿಪ್ಪುದು ಪಾಲಿಪ್ಪುದನನ್ಯಜನಸುಲಭ್ಯ ಶ್ರೀಯದುಶೈಲವಲ್ಲಭಾ !



## ॥ ಇರ್ಪತ್ತುನಾಲ್ಕನೆಯ ಬಿನ್ನಪಂ ॥

ಔದಾಸೀನ್ಯದೊಳಿತರವು ।
ನಾದರದಿಂ ಮುಕ್ತಿಪದಮನೀವೈ ನೀನೆಂ ॥
ದಾದೇವದೇವನಂಘ್ರಿಗೆ ।
ಯಾದವನಾರಾಯಣಾಂಕನೊಲವಿಂದೊರೆದಂ ॥ ೬೨ ॥

ಸರ್ವಾಭೀಷ್ಟಪ್ರದಾ! ಜೀವಾತ್ಮರ್ ಪ್ರಕೃತಿಯೊಳ್ ಪುದುಗಿರ್ಪುದಱಿಂ ತಂತಮ್ಮ ಸ್ವರೂಪಮಂ ಮಱೆತು ತಾಂ ಸ್ವತನ್ತ್ರರೆಂದೆಣಿಸಿ, ದೇಹಮೇ ತಾವೆಂದು ಭ್ರಮಿಸುವರ್. ಈ ಯಜ್ಞಾನಮವಿದ್ಯೆಯೆನಿಪುದು. ತಾಂ ಸ್ವತನ್ತ್ರರೆಂಬುದಱಿಂ ತಂತಮ್ಮ ಹಿತಂಗೆಯ್ವೆವೆಂದು ಕಾರ್ಯಾಕಾರ್ಯಮನಱಿಯದೆ ತಮಿಚ್ಛೆ ಬಂದಂತೆ ನಡೆವರ್; ಅದು ಕರ್ಮಮೆನಿಪುದು. ಆ ಕರ್ಮಮುಂ ಯಜ್ಞದಾನತಪಸ್ಸು ಮೊದಲಾದ ಸತ್ಕರ್ಮಮೆಂದುಂ, ಅಕೃತ್ಯಕರಣ ಕೃತ್ಯಾಕರಣಂ ಮೊದಲಾದ ಪಾಪಕರ್ಮಮೆಂದುಂ ಎರಡುಂ ರಾಸಿಯಾಗಿರ್ಕುಂ. ಇಂತು ಪಲವುಂ ತೆಱನಾದ ಕರ್ಮಂಗಳೊಳಾವುದಂ ಪಲಕರ್ಮಮನಾಚರಿಸುತಿರ್ಪನಾತಂಗೆ ಕರ್ಮದೊಳಭ್ಯಾಸಮುಪ್ಪುದಱಿಂ, ತಾಂ ನಡೆಯುವೇಟ್ಪಿದೆಂಬುದರ್ಕೆ ನೆನಪಿಲ್ಲದೆ ಮಱೆದಿರ್ದಾಗಳುಂ ತಾನಱಿಯದಂತೆ ಮುಂನಡೆದ ಕರ್ಮದೊಳ್ ಪ್ರವೃತ್ತಿ ಪುಟ್ಟುಗುಂ; ಇದು ವಾಸನೆಯೆನಿಪುದು. ಮತ್ತಂ, ತಾಂ ನಡೆದ ಕರ್ಮದೊಳ್ ಮತ್ತಂ ಮಗುಳ್ದಂ ಆಂ ಗೆಯ್ವೆನೆಂಬ ಪ್ರೀತಿ ಪುಟ್ಟುಗುಂ; ಇದು ರುಚಿಯೆನಿಪುದು. ಇಂತು ರುಚಿಗೂಡಿ ನಡೆದವರ್ ಆ ಕರ್ಮದ ಫಲಮಂ ಭುಜಿಸಲ್ಕೆ ಅನುಗುಣಮಾಗಿ ನೀನಿತ್ತ ದೇವಮನುಷ್ಯಾದಿಶರೀರದೊಳ್ ಪುಗುವರ್; ಇದು ಪ್ರಕೃತಿಸಂಬನ್ಧಮನೀವುದು. ಇಂತು ಶರೀರಾತ್ಮಭ್ರಮಂ ಮೊದಲಾದ ಅವಿದ್ಯೆಯುಂ, ಆಭ್ರಮದಿಂ ನಡೆವ ನಡತೆಯೆನಿಪ ಕರ್ಮಮುಂ, ಅನಡತೆಯೊಡಂಬಟ್ಟು ತಾನಱಿಯದಾಗಳುಂ ಪ್ರವರ್ತಿಸುವ ವಾಸನೆಯುಂ, ಆ ನಡತೆಯೊಳ್ ಪ್ರೀತಿಯೆಂಬ ರುಚಿಯುಂ, ಆ ರುಚಿವೆರಸು ನಡೆದ ಕರ್ಮಫಲಮಾದ ಶರೀರಸಂಬಂಧಮುಂ ಜನ್ಮಜನ್ಮದೊಳ್ ಮಿಗಲ್ದು ಮರಲ್ದು ಬರ್ಪು

ದೆಱಂದಿದೇ ಸಂಸಾರಚಕ್ರಮೆನಿಪ್ಪುದು. ಈ ಸಂಸಾರಚಕ್ರದೊಳ್ ಬವಣಿಗೊಂಬ ಜೀವಾತ್ಮರ್ ತಂತಮ್ಮ ನಡತೆಗಳಿಂ ಸ್ವರೂಪಮುಱಿಯದಂತೆ ದೀನವರೊಳ್ ದಯೆಗೆಯ್ದು, ಸುಖದುಃಖಾನುಭವದಿಂದವರ ಕರ್ಮಂಗಳಂ ಕಳೆಯುತ್ತೆ ಒರ್ಮೆ ನಿನ್ನಂ ಪೂಜಿಸಿ ಮುಕ್ತಿಯಂ ಪಡೆಯಲ್ಕನುಗುಣಮಾದ ಮನುಷ್ಯಶರೀರಮನುಂಟುಮಾಳ್ಪುದಱಿಂ ನೀಂ ಸಂಸಾರಿಗಳೊಳ್ ದಯೆಯುಳ್ಳವನೆಂಬುದು. ಇನ್ತಿರ್ಪ ಸಂಸಾರಿಗಳೊಳ್ ಕೆಲಂಬರ್ಗೆ ವೈರಾಗ್ಯಮುಂ ಪುಟ್ಟೆ ಮುಮುಕ್ಷುಗಳೆನಿಸೆ ಅವರ್ಗೆ ಮೋಕ್ಷೋಪಾಯಮನನುಗೊಳಿಪ್ಪುದಱಿಂ ನೀಂ ಮುಮುಕ್ಷುಗಳೊಳ್ ದಯೆಯುಳ್ಳವನೆನಿಪ್ಪುದು. ನಿತ್ಯಮುಕ್ತರ್ಗಂ, ಮೋಕ್ಷಮಂ ಪಡೆದವರ್ಗಂ, ನಿರವಧಿಕಾನನ್ದಮನೆಡೆಬಿಡದೆ ಬಳೆಯಿಸುವುದಱಿಂ, ಮುಕ್ತರೊಳಂ ದಯಾಳುವೆನಿಪ್ಪುದು. ಇಂತು ಸರ್ವಸಮನೆನಿಪ ನೀಂ ನಿನ್ನ ದಯಾಮೃತಾಂಬುಧಿತರಂಗದಿಂದೆನ್ನ ಅಱಿಗೆಯ್ತಂಗಳೆಂಬ ಕರುಮ್ಮ್ರಮಂ ಕಳೆದು ನಿನ್ನಾಳ್ತನಮೆಂಬ ಪ್ರೊಗರಂ ಪೊಣ್ಮಿಪ್ಪುದು ಪೊಣ್ಮಿಪುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!



## || ಇರ್ಪತ್ತೈದನೆಯ ಬಿನ್ನಪಂ. ||

ಫಲಮುಪ್ಪುದು ನಿನ್ನಿಂದಮೆ ।
ಪಲತೆಱದೊಳ್ ಪೆಱಿಸಲ್ತು ದಿಟಮೆಂದೊರೆದಂ ॥
ನಲವಿಂ ಸತ್ಯಪರಾಕ್ರಮ ।
ನಲಸದೆ ಕಲ್ಯಾಣಕೀರ್ತಿನಿಲಯನ ಪದದೊಳ್ ॥ ೪೩ ॥

ಪ್ರಸನ್ನಜನಪರಿಪಾಲಕಾ! ಪಾಲನಮೆನೆ ಯೋಗಕ್ಷೇಮಂಗಳಂ ಪ್ರೋತ್ತಿಸಗುವುದು. ಯೋಗಮೆನೆ—ಮುಂ ಪಡೆಯದ ಶ್ರೇಯಮನೊಡಗೂಡುವುದು. ಕ್ಷೇಮಮೆನೆ—ಮುನ್ನಮೆ ಇರ್ಪ ಶ್ರೇಯಸ್ಸುಗಳಂ ಕಾಪಿಡುವುದು. ಈಯೆರಡರ್ಕಂ ನೀನೇ ಸ್ವತಂತ್ರಕರ್ತೃ; ಪಿಕ್ಕಿನ ಕಾರಣಂಗಳೆಲ್ಲಮುಂ ನಿನ್ನಧೀನಮೆನಿಸಿದುಪಕರಣಂಗಳ್. ಈ ನೆಲೆಯನಱಿಯದೆ ಕೆಲಂಬರ್ ಶಾಸ್ತ್ರತಾತ್ಪರ್ಯದೊಳ್ ಭ್ರಮಿಸುವರ್. ಅವರೊಳ್ ಕೇವಲ ಕರ್ಮಠರ್ ಕರ್ಮದಿಂದಮೇ ಫಲಮೆಂದುಂ, ದೇವತಾನ್ತರಪರಾರಾಧ್ಯರ್ ದೇವತಾನ್ತರದಿಂದಮೇ ಎನ್ದುಂ, ಜ್ಯೋತಿರ್ವಿದರ್ ಗ್ರಹಾನುಕೂಲ್ಯಮೊನ್ದಿದ ಕಾಲದಿಂದಮೇ ಎನ್ದುಂ, ಲೌಕಿಕರ್ ಪುರುಷಯತ್ನದಿಂದಮೇ ಎನ್ದುಂ, ನಾಸ್ತಿಕರ್ ಕಾರಣಮೊಂದುಮಿಲ್ಲದೆ ತನ್ನಿಂದಂ ತಾನೇ ಎನ್ದುಂ ಪೇೞ್ವರ್. ಈ ಪಕ್ಷಂಗಳನಿತುಂ ಯುಕ್ತಿವಿರುದ್ಧಂಗಳ್. ಅದೆನ್ತೆನೆ:—ಕರ್ಮಮೆಂಬುದು ತಾಂ ನಡೆವ ನಡತೆ. ಅದು ಅಚೇತನಮಾಗಿರ್ಪುದಱಿಂ ಪುರುಷಂ ಬಯಸಿದ ಫಲಮಂ ತಿಳಿದೆಸಗಲಱಿಯದು. ದೇವತಾನ್ತರಮುಂ ಚೇತನಮಾದೊಡಂ ತನ್ನ ಯೋಗಕ್ಷೇಮಕ್ಕಂ ನಿನ್ನಂ ಬಯಸುವುದರಿಂ, ಸ್ವಾತನ್ತ್ರ್ಯದಿಂ ಫಲಮಲ್ತು. ಪುರುಷಪ್ರಯತ್ನಮೇ ಫಲಸಾಧಕಮಾದೊಡೆ ಕಾರಣಮೊಂದುಮಿಲ್ಲದಿರ್ದೊಡಂ ಆವಗಮನಿಬರ್ಗಂ ಅನಿತುಂ ಫಲಮಾಗವೇೞ್ಪುದು. ಆದಱಿಂದಮೊಂದುಂ ಫಲಪ್ರದಂಗಳಲ್ತು. ಮತ್ತಂ ಜಗದೊಳಾಳ್ಗಳಂ ಪೊರೆವರಸಂಗೆ ಆಳ್ಗಳೆಸಗುವ ಊಳಿಗದಂತೆ ಕರ್ಮಂ; ಆಳೆಸಗಿದೂಳಿಗಮನರಸಂಗಂ ಅರಸನಿತ್ತ ಜೀವ-

ನಮನಾಳ್ಗವೊಪ್ಪಿಸುವ ಸೇರುವೆಗಾಱನಂತೆ ದೇವತಾನ್ತರಂಗಳ್ ; ಜೀವಿತಮನೀವುದರ್ಕೆ ಮಿತಿಗೆಯ್ದ ಪಗಲಂತೆ ಕಾಲಂ ; ಅರಸನೂೞಿಗದೊಳ್ ಕೈಕಾಲ್ಗಳನಾಡಿಸುವನ್ತೆ ಪುರುಷಪ್ರಯತ್ನಂ ; ಆಳ್ದನೊಲವನಱಿಯದ ಮರುಳೂೞಿಗದವನಂತೆ ತನ್ನಿಂದೆ ತಾನೆ ಫಲಮೆಪ್ಪುದು. ಇನ್ತಿರೆ, ತಾಂ ಗೆಯ್ದೂೞಿಗದಿಂದಮೇ ಬರ್ದುಂಕುವೆನೆಂದುಂ, ಸೇರುವೆಗಾಱನಿಂದಮೇ ಬಾೞ್ವೆನೆಂದುಂ, ಮಿತಿಗೆಯ್ದ ದಿನಂ ಬಂದೊಡೆ ಸಂಬಳಂ ಬರ್ಕುಮೆಂದುಂ, ವಿಷಯಂಗಳಂ ಸೋಂಕಿ ತನ್ನ ಬೆಮರ ಸೊಮ್ಮಿಂದಮೇ ತಾಂ ಪೇರ್ಚುವೆನೆಂದುಂ, ಆಕಸ್ಮಿಕವಾಗಿ ಪೆಂಪುವಡೆದಿರ್ಪೆನೆಂದುಂ ಎಣಿಸುವರ್ ಆಳ್ದನೂೞಿಗದೊಳ್ ನೆಲೆನಿಂದು ಕಡೆವಾಯಲಱಿಯರ್. ಅದಱಿಂದೆ ಈ ಭ್ರಾಂತಿಗಳನುೞಿದು ನಿನ್ನಿಂದಮೇ ಬರ್ದುಂಕುವೆನೆಂದು ನಿನ್ನಂ ನೆರೆನಂಬಿದವರ್ ಎನ್ತಪ್ಪರಾದೊಡಂ ಅವರ ಯೋಗಕ್ಷೇಮಂಗಳಂ ಪೊತ್ತೆಸಗುವೆನೆಂದು ನೀಂ ಮುನ್ನಮರ್ಜುನಂಗೆ ಪೇೞ್ದುದಂ ಮಱೆಯದೆ, ಈಗಳೆನ್ನಂ ಪಾಲಿಪುದು ಪಾಲಿಪುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಇರ್ಪತ್ತಾಱನೆಯ ಬಿನ್ನಪಂ ॥

ಸರ್ವರನೋವುವನುಂ ನೀ ।
ನೊರ್ವನೆ ಪೆಱರಾರುಮಾರ್ಪರಲ್ತೆಂದೊರೆದಂ ॥
ನೀರ್ದ್ವಾವಸಿಱನ ಪಾದಕೆ ।
ಪೆರ್ವಗೆದಱವೇಂಟಿಕಾಱನಾದರದಿಂದಂ ॥ ೪೪ ॥

ಸರ್ವರಕ್ಷಕಾ! ನೀನೊರ್ವನೇ ಆನಿಬರಂ ಸಲಹುವಂ. ನೀನಲ್ಲದೆ ಉಱಾವ ದೇವತಾನ್ತರಂಗಳುಂ ತಂದೆ ಮೊದಲಾದ ಬನ್ಧುಗಳುಂ ಧನಧಾನ್ಯಾದಿವಿಭವಂಗಳುಂ ರಕ್ಷಕರಲ್ತು. ಅದೆನ್ತೆನೆ:—ನಾಲ್ಮೊಗಂ ರಕ್ಷಕನಲ್ತೆಂಬುದು ತನ್ನ ತಲೆಯಂ ನೀಗಾಡಿದುದಲ್ಲದೆಯುಂ ವೇದಾಪಹರಣದೊಳ್ ಮುಂಗಾಣದೆ ಮೋಸವೋದುದಱಿಂ ತಿಳಿದುದು. ರುದ್ರನುಂ ರಕ್ಷಕನಲ್ತೆಂಬುದು ವೃಕಾಸುರವರಪ್ರದಾನದೊಳ್ ಬವಣೆಗೊಂಡು ಬನ್ನಂಬಟ್ಟುದಲ್ಲದೆಯುಂ ಕೈದುವಿಡಿದು ಕಾದಿರ್ದುಂ ತನ್ನಿದಿರೊಳ್ ತ್ರೋಳ್ಗಳ್ಪಱಿದ ಱುಚುವ ಬಾಣಾಸುರನಂ ಬಿಟ್ಟು ಪರಿದೋಡಿದುದಱೊಳ್ ತಿಳಿದುದು. ಇಂದ್ರಾದಿ ದೇವತೆಗಳುಂ ರಕ್ಷಕರಲ್ತೆಂಬುದು ಹಿರಣ್ಯಾಕ ಬಲಿ ವೃತ್ರಾಸುರಾದ್ಯುಪದ್ರವಂಗಳಿಂ ತಂತಮ್ಮ ಬೀಡುಗಳಂ ಮಾಣ್ದು ಪರಿದೋಡಿದುದಱೊಳ್ ತಿಳಿದುದು. ತಂದೆಯುಂ ರಕ್ಷಕನಲ್ತೆಂಬುದು ಹಿರಣ್ಯಕಶಿಪುವಿನೊಳ್ ತಿಳಿದುದು. ಒಡಹುಟ್ಟಿದರುಂ ರಕ್ಷಕರಲ್ತೆಂಬುದು ವಾಲಿಯೊಳ್ ತಿಳಿದುದು. ಮಕ್ಕಳುಂ ರಕ್ಷಕರಲ್ತೆಂಬುದು ಕಂಸನೊಳ್ ತಿಳಿದುದು. ಗಂಡಂದಿರುಂ ರಕ್ಷಕರಲ್ತೆಂಬುದು ಪಾಂಡವರೊಳ್ ತಿಳಿದುದು. ಧನಧಾನ್ಯಾದಿವಿಭವಂಗಳುಂ ರಕ್ಷಕರಲ್ತೆಂಬುದು ದಾಯಿಗರ್ ಪಗೆವರ್ ಕೊಳ್ಳಿಕಳ್ಳರ್ ಪಳ್ಳಂ ಮೊದಲಾದುದಱಿಂದಱಿದು ಪೋಪುದಱೊಳ್ ತಿಳಿದುದು. ಇನ್ತು ತಾಂ ರಕ್ಷಕರಲ್ಲದೊಡಂ ಅಲ್ಪಬುದ್ಧಿಗಳ್ಗೆ ರಕ್ಷಕಂಗಳಂತೆ ತೋಱಿ ಮೋಸಂಗೊಳ್ವುದಱಿಂ ರಕ್ಷಕಾಭಾಸಂಗಳೆನಿಪುವು. ಅಂತಲ್ಲದೆ ನೀಂ ನಾಲ್ಮೊಗಂಗೆ ವೇದಮಂ ತಂದಿತ್ತುಂ, ರುದ್ರಂಗೆ ವೃಕಾದ್ಯುಪದ್ರವಂಗಳಂ ಪರಿಹರಿಸಿಯುಂ, ಇಂದ್ರಾದಿಗಳ್ಗೆ ದಾನವೇಂದ್ರರಂ ಗೆಲ್ದು ತಂತೆ

ವ್ಯಾಧಿಕಾರಂಗಳೊಳ್ ನೆಲಸಿಯುಂ, ಪ್ರಹ್ಲಾದಂಗಭಯಮುಂ, ಸುಗ್ರೀ-
ವಂಗೆ ರಾಜ್ಯಮಂ, ಉಗ್ರಸೇನಂಗರಸುತನಮುಂ, ದ್ರೌಪದಿಗಭಿಮಾನರ-
ಕ್ಷೆಯುಮನೊಡರ್ಚಿ ಸರ್ವರಕ್ಷಕನೆನಿಸಿ ನೆಗಳ್ದ ನಿನ್ನಂ ಮಱೆವೊಕ್ಕು
ನಿನ್ನ ಮೆಲ್ಲಡಿಗಳೇ ಉಪಾಯೋಪೇಯಂಗಳೆಂದು ನೆರೆನಂಬಿ ಪೆಱತೆಲ್ಲಮಂ
ತೊಱೆದು ಅನನ್ಯಗತಿಯೆನಿಸಿದೆಂ. ಎನ್ನಂ ರಕ್ಷಿಪುದು ರಕ್ಷಿಪುದನನ್ಯ-
ಜನಸುಲಭ, ಶ್ರೀಯದುಶೈಲವಲ್ಲಭಾ!



॥ ಇರ್ಪತ್ತೇೞನೆಯ ಪದ್ಯಂ. ॥

ತನ್ನಿರವಿಂ ಕಾನಲ್ಲದೆ ।
ನಿನ್ನಿರವಂ ತಿಳಿವನೆಳವುಗೊಂಬಂ ದಿಟಮುಂ ॥
ದುನ್ನತಮಹಿಮಂಗೊರೆದಂ ।
ಮನ್ನೆಯ ಬಲ್ವೆಗೆಯ ಬಂದಿಕಾಱಂ ನಲವಿಂ ॥ ೨೭ ॥

ಅಖಿಲಲೋಕಶರಣ್ಯಾ ! ನೀಂ ಮಱೆವೊಕ್ಕರೆಡರಂ ಕಳೆದು ಅವರ ಕ್ಷೇಮವುಂ ಸಲಿಪಂ. ಸಕಲಮುಂ ತಿಳಿಯಲ್ಕೆ ಸರ್ವಜ್ಞನುಂ, ತಿಳಿದಂತೆ ಸಗಿ ನಿರ್ವಹಿಸಲ್ಕೆ ಸರ್ವಶಕ್ತಿಯುಮೆಂದು ಪಿರಿಯರಿಂ ಕೇಳ್ದು ಆಸೆಯಿಂ ನಿನ್ನಂ ಮಱೆವುಗುವೆನೆಂದು ಪೂಣ್ದೆಂ. ಈಗಳುಮೆನ್ನ ದೋಷಂಗಳನೆಣಿಸಿ ಪಿಂದೆಗೆವೆನೆಂದೊಡೆ, ನಿನ್ನ ಗುಣಂಗಳೆನ್ನಳ್ಕಂ ತೀರ್ಚಿ ಬಲ್ಮೆಯಿಂದೆಱೆದೊಯ್ದು ನಿನ್ನ ಸಿರಿಯಡಿನೆಱಲೊಳ್ ನಿಲಿಸುತ್ತಿದೆ. ಅದೆನ್ತೆನೆ:— ಅನಾದಿಕಾಲದಿಂದೀವರೆಗಮಾನೊಡರ್ಚಿದ ಪಲವುಂ ಪಾತಕಂಗಳನೆಣಿಸಿ ಕೈದೆಗೆವನಿತಱೊಳೆ ಸೇರಿದರ ತಪ್ಪನೊಪ್ಪುಗೆಯ್ವ ನಿನ್ನ ವಾತ್ಸಲ್ಯಗುಣಂ ಮುಂದುವರಿದೆನ್ನಂ ಪಟ್ಟಿಗಟ್ಟಿಸುತ್ತಿದೆ. ಆಂ ಅಜ್ಞನುಮಶಕ್ತನುಮಾದುದಱಿಂ ನಿನ್ನ ಚಿತ್ತಂ ಬರ್ಪಂತೆ ಇನಿಸುಂ ನಡೆಯಲಾಱದೆನ್ನಂ ನೀನೇ ತೆಱದಿಂ ಕೈಯ್ವಿಡುವೆ ಎಂದೆಣಿಸಿ ಬೆರ್ಚುವನಿತಱೊಳೆ ನೀನೊಡೆಯನುಮಾನೊಡಮೆಯುಮಪ್ಪುದಱಿಂದೊಡೆಯನೊಡಮೆಯಂ ಕಾಪಿಡುವುದರ್ಕೆ ಕೂಲಿಯಿಲ್ಲೆಂಬೀಸ್ವಸ್ವಾಮಿಸಂಬನ್ಧಜ್ಞಾನಮುಭಯಮನೀಯುತ್ತಿದೆ. ಅಖಿಲಹೇಯಪ್ರತ್ಯನೀಕನಪ್ಪ ನಿನ್ನ ಮೇಲ್ಮೆಯುಮುಂ, ಸಕಲಹೇಯಾಸ್ಪದನಪ್ಪೆನ್ನ ಕೀೞ್ಮೆಯುಮನೆಣಿಸಿ ನಿನಗಮೆನಗಂ ಸಂಗತಿಯಿಲ್ಲೆಂದು ಪಿಂದೆಗೆವನಿತಱೊಳೆ ಪಿರಿಯನಾಗಿಯುಂ ಕಿಱಿಯರೊಳೊಂದುವೆರಸಿ ಸೊಗಯಿಸುವ ನಿನ್ನ ಸೌಶೀಲ್ಯಗುಣಂ ಎನ್ನಂ ಬರಸೆಳೆಯುತ್ತಿದೆ. ಬ್ರಹ್ಮಾದಿಗಳ್ಗಮವಾಙ್ಮಾನಸಗೋಚರನಪ್ಪ ನಿನ್ನಂ ಆಂ ಕಾಣ್ಬುದರಿಂದೆಂದು ಪೆಱಸಾರ್ವನಿತಱೊಳೆ ಯದುಶೈಲದೀಪಮೆನಿಸಿ ಸಕಲಜನನಯನಾನನ್ದಮಾದ ನಿನ್ನ ದಿವ್ಯಮಂಗಳ ವಿಗ್ರಹಮೆನ್ನನಾಳ್ಗೊಳುತ್ತಿದೆ, ಇನ್ತಪ್ಪುದಱಿಂ

ಜ್ಞಾನಭಕ್ತಿವೈರಾಗ್ಯಾದಿ ಸದ್ಗುಣಸಂಪನ್ನರ್ಗಂ ಅಕಿಂಚನರುಮನನ್ಯಗತಿಗಳುಮಪ್ಪ ಎನ್ನವಂದಿಗರ್ಗಂ ಒಂದೆ ಕಾಪಾಗಿ ಸರ್ವಶರಣ್ಯನೆನಿಸಿಪ ನಿನ್ನಂ ಮಱೆವೊಕ್ಕೆಂ. ಎನ್ನಂ ಕೆಯ್ವಿಡಿದು ಕಾಪಿಡುವುದು ಕಾಪಿಡುವುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



‖ ಇರ್ಪತ್ತೆಂಟನೆಯ ಬಿನ್ನಪಂ ‖

ಮಾಯಾತತ್ವಾರ್ಯಂಗಳ ।
ನೀಯೆಡೆಯೊಳ್ ಬಿಡಿಸಿ ಸಲಪುವೈ ನೀನೆಂದಾ ‖
ಮಾಯಿಮುಂರಾಟರ ಗಣ್ಡಂ ।
ಮಾಯಾತೀತಂಗೆ ಮಣಿದು ಬಿನ್ನತಿಗೆಯ್ದಂ ‖ ೮೬ ‖

ಸಕಲಜೀವದಯಾಪರಾ! ಜೀವಾತ್ಮರ್ ಪಲರಾಗಿ ನಿತ್ಯರೆಂದುಂ ಮುಕ್ತರೆಂದುಂ ಬದ್ಧರೆಂದುಂ ಮೂಱುಂ ತೆಱನಾಗಿರ್ಪರ್. ಅವರೊಳ್ ನಿತ್ಯರ್ ನಿನ್ನ ಸತ್ಯಸಂಕಲ್ಪದಿಂದೆ ಒರ್ಮೆಯುಂ ಪ್ರಕೃತಿಸಂಬಂಧಮಿಲ್ಲದೆ ಅವಗಂ ನಿನ್ನಯ ಸನ್ನಿಧಿಯೊಳಿರ್ದು ಕಲ್ಯಾಣಗುಣಂಗಳನನುಭವಿಸುತ್ತೆ ನಿನ್ನ ಪಲವೂಱಿಗದವರಾಗಿರ್ಪರ್. ಮುಕ್ತರೆಂಬರ್ ಅನಾದಿಕಾಲದಿಂ ಸಂಸಾರದೊಳಿರ್ದು ನಿನ್ನ ಕಟಾಕ್ಷದಿಂ ಸತ್ವಗುಣಸಂಪನ್ನರಾಗಿ ಮುಕ್ತಿಯುಂ ಪಡೆದು ನಿತ್ಯರಂತೆ ನಿನ್ನೂಱಿಗದವರಾಗಿರ್ಪರ್. ಬದ್ಧರೆಂಬರ್ ಸಂಸಾರದೊಳ್ ಕಟ್ಟುವಡೆದು ಪ್ರಕೃತಿಪರತಂತ್ರರಾಗಿರ್ಪರ್. ಈ ಬದ್ಧರುಂ ಸಂಸಾರಿಗಳೆಂದುಂ ಮುಮುಕ್ಷುಗಳೆಂದುಂ ಎರಡುತೆಱನಾಗಿರ್ಪರ್. ಅಲ್ಲಿ ಸಂಸಾರಿಗಳೆಂಬವರ್ ನಿನ್ನಂ ಮಱೆದು ವಿಷಯಾನುಭವಪರರಾಗಿರ್ಪರ್. ಮುಮುಕ್ಷುಗಳೆಂಬವರ್ ನಿನ್ನ ಕಟಾಕ್ಷದಿಂದೀವಿಷಯಂಗಳೊಳ್ ವೈರಾಗ್ಯಂ ಪುಟ್ಟಿದುದಱಿಂ ಈ ಪ್ರಕೃತಿಸಂಬನ್ಧಮಂ ಕಳೆಯುವೇೞ್ಪೆಂದು ನಿನ್ನಂ ಮಱೆವೊಕ್ಕರ್. ಈ ನಿತ್ಯರ್ಗ್ಗಂ ಮುಕ್ತರ್ಗ್ಗಮಪೇಕ್ಷಿತಮಪ್ಪ ನಿನ್ನೂಱಿಗಮುಂ ಮುಮುಕ್ಷುಗಳ್ಗಪೇಕ್ಷಿತಮಪ್ಪ ಮೋಕ್ಷಮುಮಂ ನೀನೆ ಮನವೊಲ್ದು ಪಾಲಿಸುವೈ. ಸಂಸಾರಿಗಳ್ಗಮಪೇಕ್ಷಿತಮೆನಿಸುವ ಇಹಪರೈಶ್ವರ್ಯಂಗಳಂ ಅವರವರ್ ಪೂಜಿಪ ದೇವತಾನ್ತರ್ಯಾಮಿಯಾಗಿರ್ದ್ದಂ ಪಾಲಿಸುವೈ. ಇಂತು ನೀಂ ಸಕಲಾತ್ಮವರ್ಗ್ಗದೊಳಂ ದಯೆಗೆಯ್ಯುತ್ತಿರ್ಪೆ, ಆನಿಂದು ನಿನ್ನಂ ಪ್ರಾರ್ಥಿಸುವ ಚಾಪಲಮಂ ಸೈರಿಸಿ ಸಲಪುವುದು ಸಲಪುವುದನನ್ಯಜನಸುಲಭ, ಶ್ರೀಯದುಶೈಲವಲ್ಲಭಾ!



## ॥ ಇರ್ಪತ್ತೊಂಬತ್ತನೆಯ ಬಿನ್ನಪಂ ॥

ಸಿರಿಯು ನೆಲೆ ಸಿದ್ಧಭೋಗ್ಯಂ ।
ನಿರವದ್ಯಂ ನಿನ್ನ ದಿವ್ಯವಿಗ್ರಹವೆಂದಾ ॥
ಧರಣೀವರಾಹಬಿರುದಂ ।
ಚರಣಾಬ್ಜಕೆ ಮಣಿದು ಚೆಲ್ವರಾಯಂಗೊರೆದಂ ॥ ೨೯ ॥

ದಿವ್ಯಮಂಗಳವಿಗ್ರಹಾ! ಪ್ರಬುದ್ಧರಾಗಳ್ ನಿನ್ನ ಕಟಾಕ್ಷಮಂ ಪಡೆದು ಸಾತ್ತ್ವಿಕರಾದವರ್ ಪ್ರಾಕೃತಮಾದ ಶಬ್ದಾದಿವಿಷಯಂಗಳ್ ಹೇಯಂಗಳೆಂದು ತಿಳಿದು, ಅವಱೊಳ್ ಪ್ರೀತಿಯನುೞಿದು, ಪರಮಭೋಗ್ಯಮಪ್ಪ ನಿನ್ನ ದಿವ್ಯಮಂಗಳ ವಿಗ್ರಹಮಂ ಬಯಸುವರ್. ಕುಮತಿಗಳ್ ಕೆಲಂಬರ್ ನಿನಗೆ ವಿಗ್ರಹಮಿಲ್ಲೆಂದು ಅಪಲಪಿಸುವರ್. ಅವರ್ ಪವಣಿಸುವ ಕುಯುಕ್ತಿಗಳೆನ್ತೆನೆ:—ಪರಮಾತ್ಮಂಗೆ ಶರೀರಮುಂಟಾದೊಡೆ ಜೀವಾತ್ಮನಂತೆ ಕರ್ಮವಶ್ಯನಕ್ಕುಂ; ಶರೀರಾತ್ಮಭ್ರಮದಿಂ ಸಂಸಾರಿಯುಮಕ್ಕುಂ; ಶರೀರಮುಳ್ಳವಂಗೆ ಇಂದ್ರಿಯಸನ್ನಿಕೃಷ್ಟವಸ್ತುಸಾಕ್ಷಾತ್ಕಾರಮಲ್ಲದೆ ಸಕಲವಸ್ತುಸಾಕ್ಷಾತ್ಕಾರಮಿಲ್ಲದುದಱಿಂ ಸ್ವಾಧೀನಮಾಗಿರ್ಪ ಕಾಲಮೊಳ್ ಮಿತಿಯಾಗಿರ್ಪ ಕಾಲದೊಳಲ್ಲದೆ ಎಣಿಸಿದನ್ತೆಲ್ಲಮನೆಸಗ ಕೂಡದುದಱಿಂದೆ ಅಲ್ಪಶಕ್ತಿಯುಮಕ್ಕುಂ: ಅದಱಿಂದೆ ಪರಮಾತ್ಮಂಗೆ ಶರೀರಮಿಲ್ಲೆಂದು ಪೇೞ್ವರ್. ಈ ಪಕ್ಷಂ ಯುಕ್ತಾಯುಕ್ತವಿಚಾರಂಗೆಯ್ವ ಭಾವುಕರ್ಗೆ ಸೊಗಯಿಸದು. ಅದೆನ್ತೆನೆ:—ದೇವತಿರ್ಯಕ್‌ಸ್ಥಾವರರೂಪಮಾದ ಸಕಲಜೀವಶರೀರದೊಳಂತರ್ಯಾಮಿಯಾಗಿರ್ದುಂ ನಿರ್ಲೇಪನಾಗಿರ್ಪವಂಗೆ ತನಗೆಂದು ಒಂದು ಶರೀರ ಮುಂಟಾದೊಡೆ ಮುಂ ಪೇೞ್ದ ದೋಷಂ ಬರ್ಕುಮೆಂಬುದು ಯುಕ್ತಮಲ್ತು. ದೇವ ಮನುಷ್ಯಾದಿಗಳ್ ತಂತಮ್ಮ ಪೂರ್ವಕರ್ಮಾನುಗುಣಮಾದ ಶರೀರದೊಳಿರ್ದು ಕರ್ಮಫಲಮನನುಭವಿಸುವುದಱಿಂದವರ್ಗೆ ಶರೀರಸಂಬಂಧಂ ದೋಷಾವಹಮಾದುದು. ಪರಮಾತ್ಮಂ ತಾಂ ಕರ್ಮಪರವಶನಲ್ಲದೊಡೆ ಜೀವಾತ್ಮರಂ ತತ್ತದ್ವ್ಯಾಪಾರದೊಳ್ ಕರ್ಮಾನುಗುಣವಾಗಿ ಪ್ರೇರಿಸುವುದರ್ಕಾಗಿ ದೇವ ಮನುಷ್ಯಾದಿ-

ಶರೀರದೊಳಿರ್ಪುದು ದೋಷಾವಹಮಲ್ತು. ಇಂತು ಹೇಯಮಾದ ದೇವಾದಿಶರೀರದೊಳಿರ್ದುಂ ನಿರ್ದೋಷನಾಗಿರ್ಪ ನಿನಗೆ ಅಪ್ರಾಕೃತಮಾದ ನಿನ್ನ ದಿವ್ಯವಿಗ್ರಹಸಂಬಂಧದಿಂ ದೋಷಲೇಶಪ್ರಸಕ್ತಿಯಿಲ್ಲ. ಮತ್ತಂ, ನಿನ್ನ ದಿವ್ಯ ಮಂಗಳವಿಗ್ರಹಂ ನಿನ್ನ ವೈಮೆಗೆ ತಕ್ಕುದಾಗಿ ನಿನ್ನ ಮನಂಬಂದುದುಮಾದ ಸುಗನ್ಧಮುಂ ಕಾನ್ತಿಯುಂ ಯೌವನಮುಂ ಮುಂತಾದ ಸಕಲಗುಣಂಗಳಂ ಪಡೆದು ಜ್ಞಾನಬಲೈಶ್ವರ್ಯ ವೀರ್ಯಶಕ್ತಿ ತೇಜಸ್ಸೌಶೀಲ್ಯಾದಿ ಸ್ವರೂಪಗುಣಂಗಳ್ಗೆ ಪ್ರಕಾಶಮಾಗಿ ಲಕ್ಷ್ಮೀನಿವಾಸಸ್ಥಾನಮಾಗಿ ನಿನ್ನ ನೆನೆದಂತಿರ್ಪುದರಿಂ ನಿನಗತಿಶಯಾವಹಮೆಂದು ಪಿರಿಯರ್ ಪೇಳ್ವರ್. ಅಂತಪ್ಪ ದಿವ್ಯಮಂಗಳ ವಿಗ್ರಹಸಾಕ್ಷಾತ್ಕಾರರಸಸರ್ವಸ್ವದಾನದಿಂದೆನ್ನ ಮನೋರಥಮಂ ಸಲಿಪುದು ಸಲಿಪುದನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !



## ॥ ಮೂವತ್ತನೆಯ ವಿನ್ನಪಂ ॥

ಶ್ರೀನಾಥ ನಿತ್ಯನಿರವಧಿ ।
ಕಾನನ್ದಾನನ್ತ ನಿನ್ನ ಸೇವೆಯ ಫಲಮಂ ॥
ದಾನಿರ್ಮಲನಡಿಗೊರೆದಂ ।
ನಾನಾವಿಧಮಕುಟಮಂಡಲೀಕರಗಣ್ಯಂ ॥ ೩೦ ॥

ಸಕಲಕಲ್ಯಾಣಗುಣಾತ್ಮಕಾ! ನಿನಗಾಮೋದಚೇಲ್ತರದಿಂ ಪಲವು ಬೀಗದಪರಾಧದಱಿಂದಾವಗಂ ನಿನ್ನ ಸಿರಿಯಡಿಯೊಳಾಗಮನೊಡರ್ಚುವುದೆಮಗೆ ಸ್ವತಸ್ಸಿದ್ಧಮೆಂಬುದು ಮಾತ್ರಮಲ್ತು. ಮತ್ತಂ ನಿನ್ನಡಿಯೊ-

ಱಂಗದವರೊಳ್ ನೀಂ ಪೊರೆಯಿಲ್ಲದೊಡವೆರೆದಿರ್ದುಂ ತಣಿಯದೆ ಅರ್ಜುನಾದಿಗಳೊಳಾಳರಸುತನಮಂ ಪಲ್ಲಟಂಗೆಯ್ದು ನಲಿವ ಸುಶೀಲನೆಂದುಂ, ಅವರೊಳ್ ತೋಱಿದ ತಪ್ಪಂ ಸೈರಿಪುದಲ್ಲದೆಯುಂ ಭೃಗುಮುನಿ ಮೊದಲಾದವರೊಳ್ ನೀನೇ ತಪ್ಪಿದವನಂತೆ ಒಡಂಬಡಿಸುವ ಕಡುಸೈರಣೆಯುಳ್ಳವನೆಂದುಂ, ಅವರ್ಗಡಸಿದ ಎಡರಂ ನೀನಿರ್ದೆಡೆಯೊಳೇ ಇರ್ದು ಸಂಕಲ್ಪಮಾತ್ರದಿಂ ಪರಿಹರಿಪುದಲ್ಲದೆಯುಂ ಗಜೇಂದ್ರನ ಮೊಱೆಯನಾಲಿಸಿ ಬಂದು ಕಡುಬೞಗೊಣ್ಡು ನೀಂ ಭರದೊಳೊದವಿದ ಕಟ್ಟೆಱಕದವನೆಂದುಂ, ಅವರೆಸಗುವ ಪ್ರತಿಜ್ಞೆಯುಂ ಸಲಿಪುದಲ್ಲದೆಯುಂ ಭೀಷ್ಮನೊಳ್ ನಿನ್ನ ಪ್ರತಿಜ್ಞಾಹಾನಿಯುಮನಂಗೀಕರಿಸಿದ ಭಕ್ತ ಪ್ರಯೋಜನೈಕಪರನೆಂದುಂ, ಅವರ್ ಅರ್ಚನಾವಿಧಿಯೊಳ್ ನಿವೇದನಂಗೆಯ್ದುದೇನಾದೊಡಮಾರೋಗಿಪುದಲ್ಲದೆ ಸುಚರಿತನ ಕುವರಂ ಬಱಿದೆ ತಂದುಮುಂದಿಟ್ಟ ಭಿಕ್ಷಾನ್ನಮಂ ಪ್ರತ್ಯಕ್ಷದೊಳ್ ಸೇವಿಸಿದ ಸುಲಭನೆಂದುಂ, ಅವರ್ಗೀವುದೆಲ್ಲಮನಿತ್ತುಂ ಮತ್ತಂ ತಣಿಯದೆ ರಾಮಾನುಜಾಚಾರ್ಯರ್ಗೆ ನಿನ್ನನೇ ಇತ್ತು ಯತಿರಾಜಕುಮಾರನೆನಿಸಿದ ಕಡುಚಾಗಿಯೆಂದುಂ, ಅವರ್ಗೆ ದೇಶವಿಶೇಷದೊಳ್ ಸಾಯುಜ್ಯಮನೀವುದಲ್ಲದೆ ಇಲ್ಲಿರ್ಪವರೆಲ್ಲರುಂ ಕಾಣ್ಬಂತೆನ್ನ ರಾಜನ್ಯಪಾಲರಂ ನಿನ್ನರ್ಚಾವಿಗ್ರಹದ ಮೆಲ್ಲಡಿದಾವರೆಯೊಳ್ ಸೇರಿಸಿದ ಪರಮರಕ್ಷಕನೆಂದುಂ, ಇವು ಮೊದಲಾದ ನಿನ್ನ ಕಲ್ಯಾಣಗುಣಂಗಳಂ ಕೇಳ್ದು ತಿಳಿದು ಸಂತಸಂಬಡೆದು ಈ ಮೊಡೆಯಂಗೆ ಊಳಿಗಮನೆಸಗುವುದಱಿಂದೆಯುಂ ಪೆಱತೊಂದಾನಂದಮಿಲ್ಲೆಂದು ಸ್ವರುಚಿಯಿಂದೀಗಳಾಂ ಪೊಸಮೂಱಂಗದವನುಮೆನಿಸಿ ಸೇರಿದೆಂ, ಎನ್ನನಾಳ್ಗೊಂಬುದು ಆಳ್ಗೊಂಬುದು ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!



ಇದು ಸಕಲಜಗದುದಯವಿಭವಾದಿಲೀಲನುಂ, ಲಕ್ಷ್ಮೀಲೋಲನುಂ, ಅಖಿಲಹೇಯಪ್ರತ್ಯನೀಕನುಂ, ಅಪ್ರಾಕೃತಪ್ರತೀಕನುಂ, ಅವಾಪ್ತಸಮಸ್ತ ಕಾಮನುಂ, ಅನಂತಕಲ್ಯಾಣಗುಣಗಣಾರಾಮನುಂ, ಸಾರಸಭವಪೂಜಿತನುಂ, ಸನಕಮುನಿಸಭಾಜಿತನುಂ, ಯದುಶಿಖರಿಶಿಖರಾಲಂಕಾರನುಂ, ಯತಿರಾಜಸಂಪತ್ಕುಮಾರನುಂ, ಆಶ್ರಿತರಕ್ಷಾಪರಾಯಣನುಮಪ್ಪ ಯಾದವಗಿರಿ ನಾರಾಯಣನಡಿದಾವರೆಯಾಟಿಗದೊಳ್ ಬಳೆದೇಟಿಗೆದಳೆದ ಯಾದವಕುಲೋದ್ಧಾರಕನುಂ, ಶುಭಗುಣೋದ್ಧಾರಕನುಮಾದ ದೇವರಾಜನೃಪಾಲಪೌತ್ರನುಂ, ಅತ್ರಿಗೋತ್ರಪವಿತ್ರನುಂ, ದೊಡ್ಡದೇವರಾಜ ಗರ್ಭಾಂಬುಧಿಕಲಾಧರನುಂ, ಸಕಲಕಲಾಧರನುಂ, ಅಶ್ವಾರೋಹಣಕಲಾರೇವಂತನುಂ, ಗಜಾರೋಹಣಮಘವಂತನುಂ, ಅಸ್ತ್ರವಿದ್ಯಾಭೃಗುರಾಮನುಂ, ಅಪ್ರತಿಮಧಾಮನುಂ, ಕರ್ಣಾಟಕಭೂಮಂಡಲಾಧೀಶನುಂ, ದೇವಸಂಕಾಶನುಂ, ಪಶ್ಚಿಮರಂಗಪುರಸಿಂಹಾಸನಾಧಿಷ್ಠಿತನುಂ ಸುಪ್ರತಿಷ್ಠಿತನುಂ, ದೇವಬ್ರಾಹ್ಮಣ ಪರಿಪಾಲನೈಕಾನ್ತನುಂ, ಸಕಲಪ್ರಜಾಕಾನ್ತನುಂ, ಅಸಕೃದಾವರ್ತಿತಷೋಡಶಮಹಾದಾನನುಂ, ಆಶ್ರಿತಸರ್ವಶ್ರೇಯೋನಿದಾನನುಂ, ರಸಿಕಜನಕರ್ಣರಸಾಯನೀಕೃತಸಂಗೀತವಿಸ್ತರನುಂ, ಸಾಹಿತ್ಯವಿದ್ಯಾನಿಕಷಪ್ರಸ್ತರನುಂ, ಪೂರ್ವದಿಗ್ವಿಜಯಯಾತ್ರಾವಿತ್ರಾ ಸಿ ತ ಚೇದಮಂಗಲೋಪಾನ್ತಕಾನ್ತಾರೋಪಗೂಢವ್ಯೂಢಸೇನಾಭಿಗುಪ್ತಪಾಂಡ್ಯಸೇನಾಧಿಪ. ಸಂಗರಕಿರೀಟ ವೆಂಕಟಕೃಷ್ಣಶಿಬಿರಸರ್ವಸ್ವಹರಣಸಮಸಮಯಸಮಾಕ್ರಾನ್ತ ಮಳಲಿ ಪರಮತ್ತಿಶಾಲೆಯ ಚೇದಿಮಂಗಲ ಕೊಂಗು ಧಾರಾಪುರಾದಿ ಪಾಂಡ್ಯನೃಪದುರ್ಗಮ ದುರ್ಗಸ್ತೋಮನುಂ, ಸಂಗರಭೀಮನುಂ, ಉದ್ವೃತ್ತಸುರತ್ರಾಣಚಮೂವಿಕ್ಷೋಭಣವಿಚಕ್ಷಣವಿಕಟಮರಾಟ ಶಿವಾಜಿವಾಜಿಸೇನಾಧಿಪ ಜಯತಜಿಕಾಟಕರ ದಾದಜಿಕಾಕಡ ಪ್ರಮುಖಕಂಠನಾಳೋಚ್ಛಲದ್ರಕ್ತಧಾರಾಸಿಕ್ತ ಕೃಪಾಣಸಂದರ್ಶನವಿಲೀನಹರಜಿ ಸಂತಜಿ ಮುಖ್ಯಮಹಾರಾಷ್ಟ್ರನೃಪಪ್ರವೇಕನುಂ, ಅಪ್ರತ್ಯನೀಕನುಂ, ಗಂಭೀರೋದ್ಧತಪರಿಘಾವರಣಭೀಷಣಶತಘ್ನೀ ಶತಸಂಕುಲಮತ್ತ ಮಾವಳಿಸೇನಾವಳೀನಿರ್ಮಿತಧರ್ಮಪುರೀಪ್ರಸಭಾಕ್ರಮಣ ಶ್ರವಣಾಪ

ಜರ್ನೀಕೃತ ಕೆಂಗೇರಿ ವಾಮಲೂರು ಬೇವುಹಳ್ಳಿ ಬೈರನೆತ್ತ ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿರ್ವೃತನಿಜಸೈನಿಕಸಮೂಹನುಂ, ಆಹವಕಲಾಶ್ವೇತವಾಹನನುಂ, ದಕ್ಷಿಣದಿಗ್ವಿಜಯಯಾತ್ರಾವಿತ್ರಾಸಿತ ಪಲಾಯಿತ ಪಾಂಡ್ಯಬಲಾನುಧಾವನಶ್ರಾಂತ ನಿಜಬಲವಿಶ್ರಾಂತಿಸ್ಥಾನೀಕೃತಜಲಧಿವೇಲಾತಮಾಲಾರಣ್ಯನುಂ, ಆನತಜನಶರಣ್ಯನುಂ, ಪಶ್ಚಿಮದಿಗ್ವಿಜಯ ಪ್ರಸ್ಥಾನಭೇರೀರವಾಕರ್ಣನಸಂಭ್ರಾಂತದುರ್ದಾಂತಹುಶಾನಖಾನಸನಾಥ ಕೆಳದಿನೃಪ ಸಮರ್ಪಿತ ಸರ್ವಸ್ವನಿರ್ವಾಪಿತಕೋಪನುಂ, ಅಮಿತಪ್ರತಾಪನುಂ, ಉತ್ತರದಿಗ್ವಿಜಯಸಮಯಾಭಿಯಾತ ಕುತುಪಶಾಹ ವಾಹಿನೀವಿಮರ್ದನ ಕ್ಷಣಾಕ್ರಾಂತ ಕಂಡಿಕೆರೆ ಚಿಕ್ಕನಾಯಕನಹಳ್ಳಿ ಹೊನ್ನವಳ್ಳಿ ಸಾರತವಳ್ಳಿ ತುಱುಗೆರೆ ಪ್ರಮುಖದುರ್ಗಗ್ರಹಪ್ರಾಕಾರವಾರನುಂ, ಅಸಹಾಯಶೂರನುಂ, ಜಡಕನದುರ್ಗಹಠಾದ್ಗ್ರಹಣವೇಳಾನಿಖಾತಸುರಂಗಮುಖಾನಲೋತ್ಕ್ಷಿಪ್ತಗಂಡೋಪಲಪಾತನಿರ್ಧೂತ ಬಿಜ್ಜವರ ಮದ್ದಗಿರಿ ಚೆನ್ನರಾಯದುರ್ಗ ವೀರಣದುರ್ಗಾದ್ಯಸಂಖ್ಯದುರ್ಗವರ್ಗಾಕ್ರಮಣಾವಸರಾವನತಸಾಮಂತನೃಪಾಲಮೌಳಿಮಣಿಘೃಣಿನೀರಾಜಿತಪದರಾಜೀವನುಂ, ಮಹಾನುಭಾವನುಂ, ಸಾಹಜಿಮುಖಮರಾಟನೃಪರಾಜಧಾನೀಕೃತಾಭಂಗುರ ಬೆಂಗಳೂರ್ ಹರಣ ನಿಷ್ಪ್ರಾಣಿತ ಶಂಭುಜಿ ಸಾಹಜಿ ಸಂತಜಿ ಹರಜಿ ಪ್ರಮುಖಮಹಾರಾಷ್ಟ್ರ ನೃಪಾಲಜಾಲನುಂ, ರಿಪುಕುಲಕಾಲನುಂ, ಸಂಗ್ರಾಮರಾಮನುಂ, ಸಾಹಸೋದ್ದಾಮನುಂ, ಪ್ರೌಢಪ್ರತಾಪನುಂ, ಪ್ರಕಟಿತಾಟೋಪನುಂ, ಅಮಿತಪರಾಕ್ರಮನುಂ, ಅಭೇದ್ಯವಿಕ್ರಮನುಂ, ಕರ್ಣಾಟಕಚಕ್ರವರ್ತಿಯುಂ, ಕಲ್ಯಾಣಕೀರ್ತಿಯುಂ, ಲೋಕೈಕವೀರನುಂ, ವೀರರೊಳ್ಗಂಡನುಂ, ಗಂಡರೊಳ್ಗಂಡನುಂ, ಅಂತೆಂಬರ ಗಂಡನುಮೆನಿಸಿ ನೆಗಳ್ದ ಶ್ರೀಮದಪ್ರತಿಮವೀರನರಪತಿ ಶ್ರೀ ಚಿಕದೇವಮಹಾರಾಜ ವಿರಚಿತಮಪ್ಪ ದಿವ್ಯಪ್ರಬಂಧಂಗಳೊಳ್

ಚಿಕದೇವರಾಜ ಬಿನ್ನಪಕ್ಕೆ ಜಯಮಂಗಳಂ.

ಸಂಪೂರ್ಣಂ.



# ಶೋಧನಪತ್ರ

| ಪುಟ | ಪಙ್ಕ್ತಿ | ಅಶುದ್ಧಂ | ಶುದ್ಧಂ |
|---|---|---|---|
| 2 | 16 | ಲೊಪ್ರಗು | ಲೊಪ್ಪ್ರಗು |
| 4 | 17 | ತೊತ್ತ್ರು | ತೊತ್ತ್ರ |
| .... | 20 | ಪೆಃಱೂ | ಪೊಱಲ್ |
| .... | .... | ಶಂಭೊಜಯು | ಶಂಭೊಜಯುಂ |
| .... | 21 | ಏಕೆಪ್ಪಂ | ಏಕೆಪ್ಪೀ |
| .... | 26 | ಕೊಶಂ | ಕೋಶಂ |
| 5 | 15 | ಗೀತೆಯೋಳ್ | ಗೀತೆಯೊಳ್ |
| 6 | 1 | ಜವಾ | ಜಯಾ |
| .... | 14 | ಶರೀದ | ಶರೀಜ |
| .... | 2? | ಜಟುಂ | ಜಟಾಂ |
| 8 | 10 | ಗಳಿಂಪ | ಗಳಿಂದಂ |
| 13 | 21 | ಪ್ರತ್ಯೆಕ್ಷ | ಪ್ರತ್ಯಕ್ಷ |
| 15 | 6 | ಆಯು.ರ್ವೆದ | ಆಯುರ್ವೇದ |
| .... | .... | ಧನುಃರ್ವೆದ | ಧನುರ್ವೇದ |
| 23 | 13 | ಏಡಟುಂ | ಏಡಕುಂ |
| .... | 21 | ತ್ತುಂ | ತಂ |
| .... | 22 | ಟ್ಟ | ಟ್ಟಿ |
| 29 | 21 | ತಿಳಿಯುಪೇ | ತಿಳಿಯುವೇ |
| 31 | 5 | ಬೊಜಗ | ಬೋಜಗ |
| 57 | 10 | ದಱು | ದಱಃ |
| .... | 14 | ತಿ-ಡಿಸಿದ | ತೆ-ಡಿಸಿದ |
| 59 | 7 | ಬಂ | ಱಂ |

ஸ்ரீ

ஸ்ரீமதே ராமாநுஜாய நம:

## இரண்டாம் பாகம்

ஸ்ரீமன் மஹீசூர ஸமஸ்தாநாதீச ஸ்ரீமத் ராஜாதி ராஜ
ஸ்ரீ சிகதேவ மகாராஜாவினுலியற்றப்பெற்ற அருமையான
நூல்களுள்

# சிகதேவராஜ விண்ணப்பம்

(ஸ்ரீ ராமாநுஜதர்சந ஸாரம் :—தமிழ் மொழி பெயர்ப்பு,
சில குறிப்புகளுடன்.)

# பிழை திருத்தம்

| பக்கம் | வரி | பிழை | திருத்தம் |
|---|---|---|---|
| 48 | 20 | குணங்கன் | குணங்கள் |
| 53 | 6 | ஸகல புவனாவதாரா | ஸகல புவனாதாரா |
| 53 | 8 | பக்ஷி | பரணி |
| 54 | 11 | நிவ்ருத்ராதிகார | நிவ்ருத்தாதிகார |
| 56 | 3 | தாராவலயம் | தாராவலயம் |
| 56 | 21 | இதைச் சுற்ழின | இதைச் சுற்றின |
| 60 | 25 | ஆபித்துநூறு | ஆயிரத்துநூறு |
| 66 | 5 | மங்களின் | மங்களில் |
| 67 | 11 | ரோகம் | ரோதம் |
| 79 | 24 | நம்முன் | நம்முள் |
| 81 | 4 | துர்தங்களை | துர்மதங்களை |
| 82 | 8 | பிரக் | பிர |
| 89 | 26 | மயக்கததால் | மயக்கத்தால் |
| 91 | 2 | பலனுண்டாவது | பலனுண்டாவது |
| 92 | 8 | போல் | பகல் போல் |
| 93 | 18 | அஷ்டச்லொகீ | அஷ்டச்லோகீ |

# ஸமர்ப்பணம்

இந்நூலுக்கு முகவுரையை நூலாசிரியர் பதினைந்து பாடல்களால் தொடக்கம் செய்கின்றார். முதல் மூன்று செய்யுட்களால் யாதவகிரி நாராயணனையும், தன்னுடைய தலைநகரான ஸ்ரீரங்கபட்டணத்தில் எழுந்தருளியிருக்கும் அரங்கநாதனையும் துதித்து பகவத் க்ருபையை வேண்டுகிறார். மேல் எட்டு பாடல்களில் தன் திக்கு விஜயத்தையும் விருதுகளையும் வர்ணிக்கிறார். கடைசி நாலு பாடல்களில் தம்முடைய வேதாந்த காலக்ஷேபத்தையும், அந்த வேதாந்தார்த்த தத்துவத்தையெல்லாம் அனைவரும் அறிந்து உஜ்ஜீவிக்கும் பொருட்டு எளிய நடையில் நூல் இயற்றியதையும் சொல்லுகிறார்.

அதன் பிறகு, உரை நடையில் கீழ்ச் செய்யுள்களில் கூறினதையே விஸ்தரிக்கிறார். அதற்கு மேல் ஒவ்வொரு விண்ணப்பத்தின் ஸாராம்சமும் விளக்கப்பட்டிருக்கிறது. நூலாசிரியர் ஒவ்வொரு விண்ணப்பத்தின் தொடக்கத்திலும் அதன் ஸாராம்சத்தை ஒரு செய்யுளினால் வெளிப்படுத்துகிறார். எல்லாப் பாடல்களின் அர்த்தமும் உரை நடையில் மொழி பெயர்க்கப்பட்டிருக்கிறது.

முதல் பத்து விண்ணப்பங்களில் ஈச்வர தத்துவ நிரூபணம் பண்ணுகிறார். பதினோராம் விண்ணப்பத்தில் சித்-தத்துவ-ஸ்வரூபத்தை விவரித்திருக்கிறார். மேல் ஏழு விண்ணப்பங்களில் அசித்-தத்துவ-நிரூபணம் செய்கிறார். ஆகபதினெட்டு விண்ணப்பங்களால் ஈசுவரன், சேதனம், அசேதனமென்னும் மூன்று தத்துவங்களையும் நிரூபிக்கிறார். இந்த மூன்று தத்துவங்களின் நிலைமையை ஆராய்ந்தால், சித், அசித் ஆகிய தத்துவங்களிரண்டும் அல்ப ஸுகங்களும் அநித்யமுமென்று அவைகளில் வைராக்கியமும், ஈசுவர தத்துவமொன்றே நிரவதிகாநந்தமென்று, அதில் இடையறு

அன்பும் பிறக்கும். இப்படி விஷய விரக்தியும், பரமாத்ம பக்தியும் பிறந்தவர்கட்கு, மோக்ஷோபாயம் அபேக்ஷித மென்று, முன் பன்னிரண்டு விண்ணப்பங்களால் விவரிக்கிறார்.

அருளமுதம் கலந்த மோக்ஷத்தை யருள்வதையே கடமையாய்க்கொண்ட ஸ்ரீமந் நாராயணனுடைய அன்பொன்றே மோக்ஷ ஹேது. அவனை அடைக்கலம் புகுந்து, சரணடைந்து, அவனுடைய மெல்லடிகளே உபாயமும் உபேயமுமென்று நம்பி மற்றெல்லாவற்றையும் துறந்த அகிஞ்சனர்களுக்கும், அநந்யகதிகளுக்கும், அவனே ஸர்வ ரக்ஷகனாய், அவர்களது யோக க்ஷேமங்களைச் சுமந்து நடத்துவன். மோக்ஷமென்பது—ப்ரக்ருதி ஸம்பந்தம் நீங்கி, புனராவர்த்தியில்லாத தேசத்தை (ஸ்ரீவைகுண்டத்தை) அடைந்து, பரவாஸுதேவன் திருவடிகளில் ஈடுபட்டு அவன் உகந்தருளி நியமித்த கைங்கர்யத்தை அநவரதம் செய்துகொண்டு "ஒழிவில் காலமெல்லாமுடனாய் மன்னி, வழுவிலா வடிமைசெய்ய வேண்டும் நாம்" என்னும்படி அவன் உகப்பென்னும் நிரவதிகாநந்தத்தை, அவன் ஸந்நிதியில் அனுபவித்துக்கொண்டு நித்யமாய் இருக்கும் இருப்பு. இப்படியெல்லாம் அறிவித்து பாடலைத் தலைக்கட்டுகிறார்.

சிகதேவராயர் கன்னட மொழியில் இயற்றிய இந்நூல் சொற்சுவையும் பொருட் பொலிவும் ஆழ்ந்த கருத்தும் வாய்ந்து, தெள்ளிய இனிய நன்னடையிலுள்ளது. இந்தச் சுவைகளை கன்னட நூலிலேயே அனுபவிக்க வேண்டும். தமிழ் மொழிபெயர்ப்பில் இவை ஒன்றையும் காணமுடியாது. அடியேனுக்குத் தமிழ் பாஷையில் பயிற்சிக் குறைவு. அறிஞர் சோதனையால் இலக்கணம் முதலிய பிழைகள் விசேஷமாக இராதென்று நம்புகிறேன்.

ஸ்ரீ ரஸ்து

# சிகதேவராஜ விண்ணப்பம்

## பீடிகை

1. லக்ஷ்மீபதியாயும் எல்லா நற்குணங்களின் கடலாயும், ஆனந்தமய விமானத்தின் உதரத்தில் ஒளிமயமாய் பிரகாசிக்கும் உருவத்தை உடையவனுயும் உள்ள ("நிலவும் சுடர் சூழொளி மூர்த்தி") யதுகிரி நாராயணன் (இந்த) அரசனுக்கு எப்பொழுதும் இரக்ஷகனுய் அருள்புரிவானுக.

2. எல்லா உலகத்தையும் ஆனந்தப்படுத்தும், படைகளின் உதவியினுல் பகைவர் உலகத்தைத் தூளாக்கும், குறைவற்ற உபாயத்தினுல் பகைவரின் மலைக் கோட்டைகளைப் பயனற்றதாகச் செய்யும், சிகதேவேந்திரனுக்கு, ஆநந்தைகரஸமாய், சக்கிரமென்னும் ஆயுதத்தை உடையவனுய், வைகுண்டத்தி லிருப்பவனுன ஸ்ரீ லக்ஷ்மீநாராயணன் பேரரசை அருள்புரிவானுக.

3. ஸ்ரீ யாதவ சைலத்தை அன்புடன் ஆளும் திருநாராயணனின் திருவடித் தாமரையில் பிறந்த வண்டுபோலுள்ள, நற்குணங்களுக் கிருப்பிடமான, மேற்றிசையிலுள்ள ஸ்ரீரங்கமென்னும் நகர்க்கு முடி-சூடிய மன்னனுன, புகழ் வாய்ந்த யதுவம்சமென்னும் கற்பகத்தருவின் செழித்த துளிர் போன்ற சிகதேவேந்திரன் மிக்க பெருமையுடன் மக்களின் அன்பைப்பெற்று அரசுபுரிவானுக.

4. மயனே, சம்பரனே, இந்திரஜித்தோ, மாரீசனே வென்று பயத்தினுல் ஆக்ரா, டில்லி, பாகநகரம், இவைகளின் பிராந்தங்களின் (அரசர்கள்) வெற்றிபெற்ற தலைவனென்று,

தன் முன் பணிவுடன் செலுத்திய திறைகளினால் செருக்குள்ள அந்த சிவாஜியின் செருக்கை முறித்து, அப்ரதிம வீரன் (நிகரில்லாத வீரன்) என்னும் விருதை ஏற்றுக்கொண்டான் (சிகதேவன்)

5. டில்லி வாயிலுக்கு விரைவாகச் சென்று, அதைச் சூறையாடி கோலகொண்டாவை மக்களும் பொருளு மற்று விடும்படி செய்து, விஜயபுரத்தை அழித்து (இந்த) செருக்கினால் பெருத்த அந்த சிவாஜியின் மகன் சம்புஜியின் மேன் மேல் வளரும் செருக்கைத் தனது வியக்கத்தக்க வல்லமையினால் சிகதேவ அரசன் அடக்கினான்.

6. யசவந்த ராவின் மூக்கைக் கொய்து, அவனை ஆயுதமற்றவனாகச் செய்து, உலகம் கொண்டாடும்படி ஜைதஜிகாடியென்பவனைப் புடைத்து சித்திரவதையும் செய்து, தாதஜிகாகடா என்பவன் முகவாய்க்கட்டையை விரைவாகக் கத்தரித்து, (இவைகளால்) எல்லா தேசத்திய கலக்கத்தை போக்கி, பூமண்டலத்தை அப்ரதிம வீரன் ஆண்டு வந்தான்.

7. ஸுரர்களும் அஸுரர்களும் சேர்ந்து, கடலைக் கடையா நிற்க, எண்டிசையில் அலைகள் கவிந்தெழ, அவைகளைப் பாகுபடுத்தித் தூள்தூளாக்கிய மந்தரமலைபோல, பெரிது சிறிதென்னாமல் ஒரு காலத்தில் எண்டிசையிலும் வளைத்துக்கொண்ட பகை அரசரின் படைகளை அபேத்ய விக்ரமன் (வெல்லமுடியாத பராக்கிரமம் உள்ளவன்) புடைத்துப் புடைத்து நாசமாக்கினான்.

8. ஒன்றுகூடிச் சூழ்ந்து முற்றுகை செய்த அரசர் குழாத்தை இடி வேகத்தில் புடைத்தான் என்று கூறில் அது அப்ரதிமனுக்கு ஒரு பெருமையோ? அவனை எதிர்த்த

வலிமை வாய்ந்த படைகள் உள்ளவர்கள் என்னப்பட்ட குதுப-சாகநன் (குடுப்ஷா), ஏதுல-சாகநன் (அடில்ஷா) என்னும் வீரர்களை அடியோடு முழுகவைத்து, நன்றாக தோற்கடித்து, மகிமையைப் பெற்றானென்று கூறில், அது அந்த சிகதேவ அரசனுக்குத் தகும்.

9. தாமதமில்லாமல், டில்லியை ஆளும் அரசனை அழைத்துவந்து அவரிடமிருந்தே தோள்வலிபெற்ற பாக நகராதிபதியையும் விஜயபுரேசனையும், உயிருள்ள பிணங்களைப்போல் பிடித்து, விசேடமாய் பாடுபடுத்தி, கைச்சிறைக் கொண்டு, அபேத்ப விக்ரடனென்னப்பட்ட சிகதேவ நரேந்திரன் அரசுபுரிந்து வாழ்கிறான்.

10. அன்று இவனுக்குப் பயந்து, கீழ்ப்படிந்திருந்த அரசர் கூட்டமெல்லாம் விரைவாக ஒன்றுசேர்ந்து நம்பிக்கையுடன் சிவாஜியைக் கண்டு, அவன் உகக்கும்படி மர்மங்களைத் தெரியப்படுத்த, அவனும் இவர்களுடன் அன்று மோசத்தால் கூட்டுச் சண்டையில் சிறிது முன்வர, கருடன் பாம்புகளின் கூட்டத்தைமேலிருந்து ஒரே பாய்ச்சலாக விரைவில் விழுந்து அழிப்பதைப்போல், அவர்களைக் கொன்று இன்று சிகதேவ அரசன் இன்ப வாழ்விலிருக்கிறான்.

11. ஒரு திசையில் துருக்கர், வேறொரு திசையில் மோரசர், மற்றுமொரு திசையில் ஆரெயர், ஒரு பக்கத்தில் தமிழர், வேறொரு பக்கத்தில் கொடகர், மற்றுமொரு பக்கத்தில் மலைநாட்டார், இவர்களெல்லாம் ஒன்றுசேர்ந்து யுத்தத்தில் முன்னேறும் போது, மிடுக்குடன் அவர் படைகளின் கூட்டத்தை எளிதில் எல்லா திசைகளுக்கும் பலிகொடுத்து, சிகதேவ அரசன் மிக்க புகழ்பெற்று இன்பமாய் வாழ்ந்து விளங்கிக் கொண்டிருக்கிறான்.

12. இவ்விதமாக க்ஷத்ரிய தர்மத்தை நடத்திக் கொண்டு வருகையே ஸ்ரீ லக்ஷ்மீபதிக்குக் கைங்கர்யமென்று சாஸ்திரங்கள் பேசும் உண்மையைத் தெளிவுற அறிந்து கொண்டு, அப்ரதிமாங்கன் காலத்தைக் கழிப்பான்.

13. தான் படித்தறிந்த வேதாந்த உண்மைகளின் போக்கை மற்றவரும் அறியவேண்டுமென்னும் நல்லெண்ணத்தால் ஆதரத்துடன் அப்ரதிமன் யாதவகிரி நாயகன் திருவடிகளில் விண்ணப்பம் செய்தான்.

14. முப்பது விண்ணப்பங்களால் அந்த வேதாந்தார்த்த தத்துவத்தையெல்லாம் எளிதில் புரியும்படி சிக தேவன் இதை (இந்நூலை) யதுசைலநாதன் திருவடியில் விண்ணப்பித்துக் கொண்டான்.

15. விரைவில் எல்லோரும் அறியும்படி, புரியாமை முதலிய தோஷங்களற்ற ஞானத்துடன், அப்ரதிம வீரநரபதி அப்ராக்ருதனை (ஸ்ரீமந் நாராயணனின்) திருவடிகளில் வணங்கி விண்ணப்பம் செய்தான்.

அது எப்படியென்னில்:— ஸ்வஸ்தி ஸ்ரீமன்மஹாராஜாதிராஜனும் ராஜபரமேச்வரனும் பிரௌட பிரதாபனும் அப்ரதிம வீர நரபதியுமான ஸ்ரீ சிகதேவ மகாராஜன் ஸ்ரீரங்கபட்டணத்தில் ஸிம்மாஸநாரூடனாய் ஸாம்ராஜ்ய தீக்ஷையை ஏற்றுக்கொண்டு தேவ பிராம்மண பரிபாலனத்தை முதன்மையாக்கி, எல்லாக் குடிகளையும் ஆண்டுவரும்பொழுது வட தேசத்தில் கொடியோன் என்னும் பெயர் வாங்கி, அறுபதாயிரம் குதிரைகள், லக்ஷக் கணக்கில் கர்வங்கொண்ட காலாட்கள் கூடின சேனையை நடத்திக்கொண்டு வந்து, டில்லிப் பிரதேசத்தையும் கொள்ளையடி, மோசச் சண்டை செய்து பாழாக்கி, விஜயபுர அரசனை வென்று, அவர்கள் நாடுகளையும், படை வீடுகளையும் கைப்பற்றி, கோல

கொண்டா அரசனைத் துன்புறுத்தி, அவன் கொடுத்ததை ஏற்றுக்கொண்டு, அந்த செருக்கால், உடனே கன்னட நாட்டில் நுழைந்த சிவாஜியைப் போர்க்களத்தில் தோற்கடித்து, அவன் படைத் தலைவர்களில் ஜைதஜிகாடகன் என்பானைக் குதிரைக் கால்களால் மிதிப்பித்து, ஜீவனுடன் வைத்து, மூக்கு, காது, குடல், கை, கால்களைக் கத்தரித்து, அந்த துண்டங்களால் பேய்க் கூட்டங்களைத் திருப்தி செய்வித்து, மேலும் தாதஜிகாகடன் என்பானின் முகவாய்க்கட்டையைக் கொய்து, அவன் தலையை ஜனக்கூட்டத்தில் ஊர்கோலம் கொண்டு, அந்த வேகத்தால் சாம்பாஜியை பயஸமுத்திரத்தில் மூழ்க வைத்து, அவன் உதவிக்கு வந்த எக்கோஜியை உயிருடன விட்டு, அவனைவிட முக்கியமானவனென்னப்பட்ட யசவந்தராவின் மூக்கை அறுத்து, மேலும் அந்த சாம்பாஜி கப்பம் கொடுத்து தன் சேனைகளையனுப்பி பெருமைபடுத்திய கோலகொண்டா விஜயாபுரத்தவர்களைத் துன்புறுத்தி, அவர்களை மானபங்கம் செய்ய டில்லியை ஆளும் மகாபாதுசாக னென்னப்பட்ட அவரங்கசாஹனை வரவழைத்து, அவன் உதவியால் இவ்விருவர்கள் நாடுகளையும் பொருளையும் கவர்ந்து கைச் சிறைக்கொண்டு, மேலும் அந்த மராடரின் ஆடோபத்தை நம்பி முன் வந்து, இடவலங்களில் சிறிது சிறிது யுத்தம் செய்த மொரசர், தமிழர், கொடகர், மலைநாடு அரசர்களைக் கஷ்டப்படுத்தி, இவ்வகையில் எண் திசைகளையும் ஜயித்து, ஸுகமாய் ஸத்கதா விநோதத்தில் இருக்குமளவில், மனதில் உதித்த தயாரஸத்தால் யோசித்தான் (சிகதேவ அரசன்).

எண் திசைகளிலிருக்கும் பகைவர்கள் அடங்கினதால் அரசர்களிடமிருந்து ஏற்படக்கூடிய பயமில்லாமலும், தேவதானுக்ரகத்தால் நீர்வளம் நிலவளம் நிறைந்ததால் தைவிக

பயமில்லாமலும், பிரஜைகளனைவரும் இம்மையில் ஸுக வாழ்விலிருக்கிறார்கள். இவர்கட்குப் பரகதியையும் வாங்கிக் கொடுக்க வேண்டுமாயிருக்கிறதென்று ஆராய்ந்து,

"மாம்ஹி பார்த்த வ்யபாச்ரித்ய
யேபி ஸ்யு: பாபயோநய : |
ஸ்திரியோ வைச்யாஸ்ததா சூத்ரா
ஸ்தேபி யாந்தி பராங்கதிம்" ||

என்று கீதையில் ஸ்ரீ கிருஷ்ணன் தானே உறுதிபடுத்தின முறையில், பின் எவ்வளவு பாபிகளாயிருந்தாலும், எந்த ஜாதியில் பிறந்திருந்தாலும், எப்பொழுதும் தத்துவஞானத்துடன் அவனிடத்தில் பக்தி செய்து நம்பினவர்க்கு மோக்ஷம் தப்பமாட்டாதென்று அறிந்து, அக்ஷரமறியாத வேளாளர்கட்கும், பெண்களுக்கும், வடமொழியில் தத்துவ ஞானமேற்படுவது அருமை என்று, எல்லோரும் அறியும்படி கன்னடமொழியில் எளிய நடையிலேயே எல்லா தத்துவார்த்தங்களையும் திரட்டித் தான் தன் குலதேவதையான யாதவகிரி நாராயணனுடைய திருவடித் தாமரைகளில் விண்ணப்பம் செய்யும் முறையில் முப்பது விண்ணப்பங்களைத் தொகுத்துக் கட்டினான். அவைகளில் :—

முதல் விண்ணப்பத்தில் அவாப்த ஸமஸ்தகாமனான ஸ்ரீமந் நாராயணன், பர, வ்யூஹ, விபவ, அந்தர்யாமி அர்ச்சாவதாரங்களை அங்கீகரித்தது பக்தானுக்ரஹார்த்தமென்று அவனுடைய தயாதிசயத்தை வெளியிட்டான்.

இரண்டாம் விண்ணப்பத்தில் ஸ்ரீமந்நாராயணனே ஜகத் காரணனென்று நிச்சயித்தான்.

மூன்றும் விண்ணப்பத்தில் அந்த ஜகத் காரண வஸ்துவை அறிய முடியாதென்ற ஆக்ஷேபத்தை நிவர்த்திசெய்தான்.

நான்காம் விண்ணப்பத்தில் அந்த ஜகத் காரண வஸ்துவை அறிவது வேதசாஸ்திரங்களிலிருந்தே என்று வர்ணித்தான்.

ஐந்தாம் விண்ணப்பத்தில் அந்த வேதசாஸ்திரங்களனைத்தும் ஸ்ரீமந்நாராயணனையே குறிப்பிட்டுக் காண்பிக்கும் முறையை அறிவித்தான்.

ஆறும் விண்ணப்பத்தில் அந்த வேத சாஸ்திரங்களில் தோன்றும் விரோதங்களை விலக்கினன்.

ஏழாம் விண்ணப்பத்தில் அந்த வேத சாஸ்திர ஸித்தமாய் நாராயணனுக்குச் சரீரமான ஜகத் மித்யை அல்ல, ஸத்யமாயிருக்கிறது என்பதைத்தாபித்தான்.

எட்டாம் விண்ணப்பத்தில் கனவின் அத்தாட்சியிலிருந்து உலகம் பொய் என்று மயங்காமல் இருக்கும் பொருட்டு, கனவில் காணும் வஸ்துக்களை அந்தக்காலத்தில் ஜகதீச்வரன் உண்டுபண்ணுவதால் ஸத்யம் என்று நிச்சயித்துச் சொன்னன்.

ஒன்பதாம் விண்ணப்பத்தில் ஜகத்தை விஷமமாய் ஸ்ருஷ்டிக்கிறதனுல் ஜகதீச்வரன் விஷமனும், நிர்தயனுமாவான் என்னும் ஆக்ஷேபத்தைத் தீர்த்தான்.

பத்தாம் விண்ணப்பத்தில் கடபடாதி திருஷ்டாந்தத்திலிருந்து ஜகத்திற்கு மூன்றுவகை காரணங்கள் வேறுவேறாய் இருக்கின்றனவென்னும் ஆக்ஷேபத்துக்கு, சிதசித்வஸ்து சரீரகனை ஈச்வரனே மூன்றுவகை காரணங்களுமாய் இருப்பன் என்று ஒப்பத்தக்க உத்தரம் கொடுத்தான்.

இப்படி பத்து விண்ணப்பங்களில், ஸ்ரீமந் நாராயணனே பரமதயாளுவும், ஜகத்காரணனும் அபரிச்சேத்ய மகிமனும், சகல வேத வேத்யனும், ஆச்சர்ய சரிதனும்,

சேதனா சேதன சரீரகனும், அகடிதார்த்தகடகனும், ஸர்வ ஸமனும், மூன்றுவகைக் காரணனும் என அறிவித்ததனால் ஈச்வரதத்துவ நிரூபணம் பண்ணினான்.

பதினோராம் விண்ணப்பத்தில் ஜீவதத்துவஸ்வரூபத்தை விவரித்தான்.

பன்னிரண்டாம் விண்ணப்பத்தில் தத்துவஸ்ருஷ்டிகிரமத்தைக் காட்டினான்.

பதின்மூன்றாம் விண்ணப்பத்தில் ப்ரும்மாண்ட ஸ்ருஷ்டி முறையை வகுத்துக்காட்டினான்

பதினான்காம் விண்ணப்பத்தில் அந்த ப்ரும்மாண்டத்திலிருக்கும் பதினான்கு லோகங்களுடைய நிலைமையை நிர்ணயித்தான்.

பதினைந்தாம் விண்ணப்பத்தில் பூமண்டலத்தின் பரிமாணத்தைக் கணித்தான்.

பதினாறாம் விண்ணப்பத்தில் ஸுகத்தை அனுபவிக்கும் ஸ்தானமான ஸ்வர்க்கங்களுடைய நிலைமையைத் தெரியவைத்தான்.

பதினேழாம் விண்ணப்பத்தில் துக்கத்தை அனுபவிக்கும் இடங்களான நரகங்களுடைய ஸ்திதியை விரித்துரைத்தான்.

பதினெட்டாம் விண்ணப்பத்தில் பாபபலங்கள் குரூரமாயிருக்குமென்று காட்டி, அந்த பாபங்களனைத்தும் ஸ்ரீமந் நாராயணனுடைய சரணாரவிந்தத்தில் பக்தியினாலேயே பரிகாரமாகும், என்பதை மனதில் பதியும்படியாகச் சொன்னான்.

இப்படிப் பரதத்துவஸ்வரூபமென்பது முதலாக இதுவரையில் ஏழு விண்ணப்பங்களில், ப்ராக்ருத ஸிருஷ்டிக்ரமமும், அந்த தத்துவங்களிலிருந்து பிறந்த ப்ரம்மாண்டத்தி

னுடைய விஸ்தாரமும் அந்த ப்ரம்மாண்டத்திலிருக்கும் பதினுலோகங்களுடைய நிலைமையையும், அவைகளில் பூமண்டலத்தின் பரிமாணமும், பூ ஸ்வர்க்கங்களும், நரக யாதனைகளும், அந்த யாதனு பரிகாரோபாயமும் சொன்னதால், அசித் தத்துவ-நிரூபணம் செய்தான்.

இப்படி பதினெட்டு விண்ணப்பங்களால் ஈச்வரன் சேதனம், அசேதனமென்னும் தத்துவத்ரயத்தையும் நிரூபித்தான். இந்த மூன்று தத்துவங்களின் நிலைமையை ஆராய்ந்தால், சித், அசித் ஆகிய தத்துவங்களிரண்டும் அல்ப ஸ்வர்கங்களும் அநித்யமுமென்று, அவைகளில் வைராக்கியமும், ஈச்வர தத்துவமொன்றே நிரவதிகாநந்தமென்று அதில் அனுராக்தியும் பிறக்கும்.

இப்படி விஷயவிரக்தியும் பரமாத்மபக்தியும் பிறந்தவர்கட்கு மோக்ஷோபாயம் அபேக்ஷிதமென்று மூன் பன்னிரண்டு விண்ணப்பங்களினுல் விவரித்தான். அவை தெங்ஙனே யெனில் :—

பத்தோன்பதாம் விண்ணப்பத்தில் நாலு புருஷார்த்தங்களில் மோக்ஷமே பெரிதென்று படிகட்டினுன்.

இருபதாம் விண்ணப்பத்தில் ஸாத்விகசாஸ்திரங்களிலிருந்தே மோக்ஷோபாயத்தை அறியவேண்டுமென்று சொன்னுன்.

இருபத்தோன்றும் விண்ணப்பத்தில் எல்லா தந்திரங்களிலும் ஸ்ரீ பாஞ்சராத்ரமே பிரபலப்ரமாணமெனபதைக் கோத்துக்காட்டினுன்.

இருபத்திரண்டாம் விண்ணப்பத்தில் மோக்ஷத்திற்கு உபயோகமான விஷயவைராக்கியம் துர்க்கடமென்னும் ஆக்ஷேபத்தைப் போக்கினுன்.

